ಓಂ.

ಒಂದು ಹೆಣ್ಣುಮಕ್ಕಳ ಸಂಸ್ಥೆಯಲ್ಲಿಯ

# ಪ್ರಾರ್ಥನೋತ್ತರ ಭಾಷಣಗಳ ಸಾರವು

ಭಾಗ ೩





(ತಾ. ೧೫—೧೨—೪೭ ರಿಂದ ೨೭—೨—೪೮)

ಬೆಲೆ ೧೨ ಆಣೆ

# ಪ್ರಾರ್ಥನೋತ್ತರ ಭಾಷಣದ

## ೩ನೇ ಭಾಗದ

## ಮೊದಲಮಾತು

'ಪ್ರಾರ್ಥನೋತ್ತರ ಭಾಷಣ,' ಅಮೌಲ್ಯ ಅನುಭವದ ಸಾರ; ಹಿರಿದು ಜೀವನಕ್ಕೆ ಇತರ ಹಿರಿ-ಕಿರಿಯ ಜೀವಗಳೊಡನೆ ಬಂದ ಸಂಘರ್ಷ [illegible] ನಾವು ಇದಕ್ಕೆ ಹೇಳಬಹುದು. ಇದರಲ್ಲಿ ಮನೋವೈಜ್ಞಾನಿಕನಿಗೆ ಆಧಾರವಿದೆ, ವ್ಯವಹಾರವಾದಿಗೆ ಸಮಾಧಾನವಿದೆ, ಭಾವನಾಜೀವಿಗೆ ಸಂತೃಪ್ತಿ ಇದೆ. ನಸುಕಿನ ತಂಗಾಳಿಯ ಸೊಂಪಿನಲ್ಲಿ, ಪ್ರಾರ್ಥನೆಯ ಪಾವಿತ್ರ್ಯ, ನಿತ್ಯಕರ್ಮಗಳ ಅನುಭವದಿಂದೊಡಗೂಡಿ ಈ ಕೃತಿ ಬರಹಲ್ಲಿಳಿದಿದೆ. ಇಂಥಹ ಕೃತಿಗೆ ಮೊದಲಮಾತು ಬರೆಯಲು ನನ್ನದದೇನು ಶಕ್ತಿಯೋ!

ಧಾರವಾಡ
೨೮—೧—೫೩



ಸರೋಜಿನಿ ಮಹಿಷಿ ಎಂ. ಎ.,
ಸಂಪಾದಕ
ವೀರಮಾತೆ.

# ಪ್ರಾರ್ಥನೋತ್ತರ ಭಾಷಣದ

## ೧ನೇ ಭಾಗದ

## ಮುನ್ನುಡಿ

ಶ್ರೀಮತಿ ಮಹಾಲಕ್ಷ್ಮಿ ಕುವರಿ ಇವರು ಒಂದು ಹೆಣ್ಣುಮಕ್ಕಳ ಸಂಸ್ಥೆಯಲ್ಲಿಯ ಪ್ರಾರ್ಥನೋತ್ತರ ಭಾಷಣಗಳ ಸಾರವನ್ನು ವೃತ್ತಪತ್ರದಲ್ಲಿ ಮೊದಲು ಪ್ರಸಿದ್ಧಿಸಿ, ಆಮೇಲೆ ಅದನ್ನೇ ಪುಸ್ತಕರೂಪದಲ್ಲಿ ಪ್ರಸಿದ್ಧಿಸಿ ಒಂದು ಹೊಸ ಮಾದರಿಯ ಉಪಕ್ರಮವನ್ನು ಪ್ರಾರಂಭಿಸಿದ್ದದಕ್ಕಾಗಿ ಜನತೆಯು ಅವರಿಗೆ ತುಂಬಾ ಋಣಿಯಾಗಿದೆ. ಭಾರತದಲ್ಲಿ ಎಷ್ಟೋ ಹೆಣ್ಣುಮಕ್ಕಳ ಹಾಗು ಗಂಡುಮಕ್ಕಳ ಸಂಸ್ಥೆಗಳು ಇದ್ದರೂ, ಇಂಥ ಉಪಕ್ರಮಗಳು ಯಾವ ಸಂಸ್ಥೆಗಳಲ್ಲೂ ಇದ್ದದ್ದು, ಗೊತ್ತಾಗಿಲ್ಲ. ಇದ್ದರೂ ಒಂದೆರಡು ಕಡೆಗಳಲ್ಲಿರಬಹುದು. ಕರ್ನಾಟಕದಲ್ಲಿಯಂತೂ ಇಲ್ಲವೇ ಇಲ್ಲ. ಇದರಲ್ಲಿ ಭಾಷಣಕಾರರು ತಮ್ಮ ಜೀವನದಲ್ಲಿ ಪ್ರತ್ಯಕ್ಷವಾಗಿ ಅನುಭವಿಸಿದ ಉದಾಹರಣೆಗಳನ್ನು ಕೊಟ್ಟು, ಸಾಮಾನ್ಯ ಸಿದ್ಧಾಂತಗಳನ್ನು ಹೊರಡಿಸುತ್ತಿರುವದು ಬಹಳ ಮಾದರಿ ಸ್ವರೂಪದ್ದು ಮತ್ತು ಯೋಗ್ಯವಾಗಿರುತ್ತದೆ. ಇಷ್ಟೇ ಅಲ್ಲದೆ, ಎಷ್ಟೋ ಈಗಿದ್ದ ಮತ್ತು ಮುಂದೆ ಹೊರಡಬಹುದಾದ ಸಂಸ್ಥೆಗಳ ಚಾಲಕರಿಗೆ ಆದರ್ಶಭೂತವಾಗಿರುತ್ತದೆ. ಆ ಅನುಭವವನ್ನವರು ತಮ್ಮ ಕೈದೀವಿಗೆಯಂತೆ ಉಪಯೋಗಿಸಿದರೆ ಬಹಳ ಲಾಭವಾಗುವದು ಸಂಸ್ಥೆಗಳನ್ನು, ಅದರಲ್ಲಿಯೂ ಹೆಣ್ಣುಮಕ್ಕಳ ಸಂಸ್ಥೆಗಳನ್ನು, ನಡೆಸುವ ಬಗ್ಗೆ ಸಾಮಾನ್ಯ ಜನತೆಯು ತಮ್ಮ ಸ್ವಾರ್ಥಕ್ಕಾಗಿ ಹೇಗೆ ಎಡರುಗಳನ್ನೊಡ್ಡುವರು, ಸಂಸ್ಥೆಗಳಿಂದ ಲಾಭಪಡೆದವರು, ಪಡೆಯಬಹುದಾದಂತಹರು ಸಹ ಹೇಗೆ ಸಂಸ್ಥೆಗಳ ನಾಶಕ್ಕೆ ಕಾರಣರಾಗಬಹುದು? ನಿಜವಾದ ಗುರಿಯಿಟ್ಟುಕೊಂಡು ನಿಷ್ಠೆಯಿಂದ ಕೆಲಸಮಾಡುವವರಾರು? ಕೆಲಸದ ಸೋಗುಹಾಕಿಕೊಂಡವರಾರು? ಇವೆಲ್ಲ ಸಂಗತಿಗಳು ಆಯಾ ಸಾರ್ವಜನಿಕ ಸಂಸ್ಥೆಗಳ ಇತಿಹಾಸದ ಮೇಲಿಂದ ಗೊತ್ತಾಗುವವು. ಭಾವನಾಪ್ರಧಾನರಾದ, ಅಜ್ಞಾನಿ, ಮತ್ತು ಪರಂಪರಾಗತವಾದ ರೂಢ,ಮೂಢ ಕಲ್ಪನೆಗಳಿಗೊಳಪಟ್ಟ [illegible] ಮತ್ತು ತಜ್ಞರ ಶಾಸ್ತ್ರೀಯ

ವಿರೋಧ ಇವುಗಳಲ್ಲಿ ಬಹಳ ವ್ಯತ್ಯಾಸವುಂಟು. ಸಾಮಾನ್ಯ ಜನತೆಯ ವಿರೋಧವು ಸ್ವಾರ್ಥಿ ಜನರಿಂದ ಪ್ರೇರಿಸಲ್ಪಟ್ಟಿರುವದರಿಂದ ಅದು ಬಹಳ ದಿನಗಳವರೆಗೆ ಬಾಳಲಾರದು. ಕಾರ್ಯಕರ್ತರು ಆ ವಿರೋಧದ ರಭಸದ ಕಾಲವನ್ನಷ್ಟು ಸಹಿಸಿದರೆ ಮುಂದೆ ಆ ವಿರೋಧವು, ನಿಜಸಂಗತಿಯು ತಿಳಿಯುತ್ತ ಹೋದಂತೆ ಕ್ರಮೇಣ ಕರಗುವದು. ಮತ್ತೆ ಸಂಧಿ ಸಿಕ್ಕಕೂಡಲೇ ಚೇತರಿಸಿಕೊಂಡು ಮರಳಿ ಶಾಂತವಾಗುವದು. ಈ ಎಲ್ಲ ಆಂದೋಲನಗಳಲ್ಲಿ ನಿಜವಾದ ಪ್ರಚಾರವಂತರಿಗೆ ಸಿಂಹಾವಲೋಕನ ಮಾಡಲು ಆಸ್ಪದಸಿಕ್ಕು,ಅವರು ಹೊಸ ಮಾದರಿಯ ಕೆಲಸಕ್ಕೆ ಬೆಂಬಲಕೊಟ್ಟು ಕ್ರಾಂತಿಮಾಡುವರು. ಇಡೀ ಭಾರತದಲ್ಲಿಯೇ ಏಕೆ, ಜಗತ್ತಿನಲ್ಲಿಯೇ ಹೆಣ್ಣುಮಕ್ಕಳ ವಿಷಯವಾಗಿ ಸರಿಯಾದ ಕಲ್ಪನೆ ಇರದಿದ್ದಾಗ, ಕರ್ನಾಟಕದಲ್ಲಿ ಎಲ್ಲಿಂದ ಬರಬಹುದು? ಹೆಣ್ಣುಮಕ್ಕಳ ವಿಷಯವಾಗಿ ಜಗತ್ತಿನಲ್ಲಿ ನಡೆದುಂಥ ವಿಚಾರಗಳನ್ನು ಪರಿಶೀಲಿಸಲು, ಕಂಡುಬರುವದೇನಂದರೆ—ಹೆಣ್ಣುಮಕ್ಕಳ ಎಲ್ಲ ಚಟುವಟಿಕೆಗಳು ಗಂಡಸಿಗೆ ಪ್ರತಿಯೊಂದು ವಿಷಯದಲ್ಲಿ ಎದುರಿಸಬೇಕೆಂಬ ಉದ್ದೇಶದಿಂದ ನಡೆದಿರುತ್ತವೆ. ಗಂಡಸರು ವಿದ್ಯಾವಂತರು, ಹೆಣ್ಣುಮಕ್ಕಳೇಕೆ ವಿದ್ಯೆಗಳಿಸಬಾರದು? ಗಂಡಸರು ರೊಕ್ಕಗಳಿಸುತ್ತಾರೆ, ಹೆಣ್ಣುಮಕ್ಕಳೇಕೆ ಗಳಿಸಬಾರದು? ಗಂಡಸರು ಬೇಕಾದಷ್ಟು ಲಗ್ನವಾಗಬಹುದು, ಆದರೆ ಹೆಣ್ಣುಮಕ್ಕಳೇಕೆ ಆಗಬಾರದು? ಗಂಡಸರು ಸ್ವತಂತ್ರರಿದ್ದಂತೆ ಹೆಣ್ಣುಮಕ್ಕಳೇಕೆ ಇರಬಾರದೆಂಬ ಕಲ್ಪನೆಯೇ ಈಗಿನ ಹೆಣ್ಣುಮಕ್ಕಳ ಚಟುವಟಿಕೆಗಳ ತಳಹದಿಯಾಗಿದೆ. ಸನಾತನಿಗಳಂತೂ ಮೊದಲಿನಿಂದಲೂ ಹೆಣ್ಣುಮಕ್ಕಳ ವಿಷಯವಾಗಿ ದೊಡ್ಡದಾದ ನೀತಿ, ಪಾವಿತ್ರ್ಯದ ಕಲ್ಪನೆಯ ತಳಹದಿಯ ಮೇಲೆ ನಿಂತು ಬದಲಾಯಿಸಿದ ಪರಿಸ್ಥಿತಿಯ ವಿಚಾರವೇನೂ ಮಾಡದೆ, ಎಲ್ಲ ಹೆಣ್ಣುಮಕ್ಕಳ ಚಟುವಟಿಕೆಗಳನ್ನೂ ಹೀಯಾಳಿಸುತ್ತಿದ್ದಾರೆ. ಆದರೆ "ಸಾಮರ್ಥ್ಯವಿದೇ ಚಟುವಟಿಕೆಗಳಿದಂ"ಬಂತೆ ಸುಧಾರಕರು, ಮಾಡಿದ ಕಾಯ್ದೆಗಳಿಗೆ ತಲೆ ಬಗ್ಗುತ್ತಿರುವರು. ಆದರೆ ಈ ಎರಡೂ ಮಾದರಿಯ ವಿಚಾರಸರಣಿಯನ್ನು ಬಿಟ್ಟು, ನಿಜವಾದ ಈಶ್ವರೀ ಸಂಕಲ್ಪದಂತೆ, ಅವನೇ ನಿರ್ಮಿಸಿದ ಸೃಷ್ಟಿಧರ್ಮದಂತೆ ಹೆಣ್ಣುಮಕ್ಕಳ ದೇಹದ ಮನಸ್ಸಿನರಚನೆ ಹೇಗಿದೆಯೋ ಅದನ್ನೇ ತಳಹದಿಯನ್ನಾಗಿಟ್ಟುಕೊಂಡು, ನಮ್ಮ ಕೃತ್ರಿಮ ಸಮಾಜರಚನೆಯನ್ನು ಹೇಗೆ ಮಾರ್ಪಡಿಸಿದರೆ

ನಿಜವಾದ, ಹೆಣ್ಣುಮಕ್ಕಳ ಆರೋಗ್ಯ, ನೀತಿ, ಸಾವಿತ್ರ್ಯ ಉಳಿದು, ಇಹ ಪರ ಕಲ್ಯಾಣ ಸಾಧಿಸುವದು ಎಂಬುದು ಗೊತ್ತಾಗುವದು. ಇದು ಪ್ರಚಲಿತ ಅಧೋಗತಿಗೊಯ್ಯುವ ಸ್ತ್ರೀಸ್ವಾತಂತ್ರ್ಯದ ಮತ್ತು ಸ್ವೈರಾಚಾರದ ಬದಲಾಗಿ ಹೆಣ್ಣುಮಕ್ಕಳು ಸ್ವಾವಲಂಬಿಗಳಾಗಿ ರಾಷ್ಟ್ರದ ಕಲ್ಯಾಣವಾಗುವದು. 'ನಾನಾನಾರಿ ನಿಷ್ಫಲಾ ಲೋಕಯಾತ್ರಾ' 'ಗೃಹಿಣೀ ಗೃಹಮುಚ್ಯತೇ' 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೆ ತತ್ರ ದೇವತಾಃ' ಎಂಬಂತೆ ಬಾಯಿಂದ ತತ್ವಗಳನ್ನು ಒಪ್ಪಿ, ಗಂಡಸು ಪ್ರತ್ಯಕ್ಷವಾಗಿ ಗೃಹದ ಅಧಿಕಾರವನ್ನು ಆಕ್ರಮಣಶೀಲತೆಯಿಂದ ವ್ಯಾಪಿಸಿರುವನು. ಮತ್ತು ತನಗೆ ಅನುಕೂಲವಾಗುವಂತೆ ಹೆಣ್ಣುಮಕ್ಕಳ ಸ್ವಾಭಾವಿಕರಚನೆ ಹಾಗೂ ಕರ್ತವ್ಯಗಳ ನೆವದಿಂದ ಅವರನ್ನು ಬಂಧನದಲ್ಲಿಟ್ಟಿರುವನು. ಬಹಳ ದಿನಗಳಿಂದ ಅದೇ ವ್ಯೈಯುಂಡಿದ್ದರಿಂದ ಎಷ್ಟೇ ನಷ್ಟವುಂಟಾಗಿದ್ದರೂ ಸಹ ಅದರ ಕಾರಣದ ವಿಚಾರ ಗಂಡು-ಹೆಣ್ಣುಗಳಿಬ್ಬರಿಗೂ ಹೊಳೆಯದಂತಾಗಿದೆ. ಇದರಿಂದ ಕಾರ್ಯ-ಕಾರಣದ ಸಂಬಂಧದ ವಿಚಾರಮಾಡದೆ, ಸಾಮಾಜಿಕ ನಿಯಮಗಳ ಉಲ್ಲಂಘನೆ ಮಾಡಿದ್ದರಿಂದುಂಟಾದ ದುಷ್ಪರಿಣಾಮಗಳಿಗೆ, ಸೃಷ್ಟಿನಿಯಮದ ಭಂಗ ಕಾಯಮೇಶೀರ ಪದ್ಧತಿಯಿಂದ ತಿಳಿಯದೆ, ಗಂಡು-ಹೆಣ್ಣುಗಳು ಮಾಡುತ್ತಿರುವದರಿಂದ ಇಬ್ಬರೂ ದುಃಖಕ್ಕೀಡಾಗಿದ್ದಾರೆ. ಆದ್ದರಿಂದ ಗಂಡಸು ಪ್ರಧಾನವಾದ ಈ ಕುಟುಂಬರಚನೆಯನ್ನು ಹೆಂಗಸು ಪ್ರಧಾನ ಕುಟುಂಬ ರಚನೆಯನ್ನಾಗಿ ಮಾಡುವದಗತ್ಯವಿದೆ. ಏಕೆಂದರೆ, ಗಂಡಸು ಪ್ರಧಾನ ಸಮಾಜ ರಚನೆಯಲ್ಲಿ ಗಂಡಸಿನಿಂದ ನೀಗದಂಥಹ ಎಷ್ಟೋ ಜನರ ಸಂರಕ್ಷಣೆ (ಹೆಂಡತಿ, ಮಕ್ಕಳು, ಅಣ್ಣತಮ್ಮಂದಿರು ಮುಂತಾದವರ) ಮಾಡುವ ಭಾರವು ಅವನ ಮೇಲೆ ಬಿದ್ದದರಿಂದ ಅವನು ಅದನ್ನು ನೆರವೇರಿಸಲು, ಲಂಚ ಮೋಸತನ, ಕಳವು, ಠಕ್ಕತನ ಮುಂತಾದ ರೊಕ್ಕಗಳಿಸುವ ಪಾಪ, ಮಾರ್ಗಗಳನ್ನು ಅನುಸರಿಸಬೇಕಾಗಿದೆ. ಮತ್ತು ಹೆಣ್ಣುಮಕ್ಕಳು ಹೊಟ್ಟೆ ಬಟ್ಟೆಗಳ ಸಲುವಾಗಿ ತೀರ ಪರಾವಲಂಬಿಯಾಗಬೇಕಾಗಿದೆ. ಇದರಿಂದ ಅವರು ನೀತಿಭ್ರಷ್ಟ, ಕರ್ತವ್ಯಭ್ರಷ್ಟ, ಹೊಣೆಗೇಡಿಗಳಾಗಿರುವರು. ಇದರಲ್ಲಿ ಗಂಡಸರ ಅಧಿಕಾರ ಹೆಂಗಸರು ಕಸಿದುಕೊಂಡಂತಾಗದೆ, ತಮ್ಮ ಅಧಿಕಾರ

ವನ್ನು ಹೆಂಗಸರು ತಾವು ವಹಿಸಿಕೊಂಡಂತಾಗುವದು. ಈಗ ಪ್ರಚಲಿತವಿದ್ದ ಸಮಾಜರಚನೆಯಲ್ಲಿ ಈ ಪದ್ಧತಿ ಮೊದಮೊದಲು ಸರಿಹೋಗಲಿಕ್ಕಿಲ್ಲ. ಆದ್ದರಿಂದ ಈ ಪ್ರಚಲಿತ ಪದ್ಧತಿಯನ್ನು ಬದಲಾಯಿಸಲು ಹೆಣ್ಣುಮಕ್ಕಳು ದೇವರ ನಿಯಮದ ತಳಹದಿಯ ಮೇಲೆ ನಿಂತು ಹೋರಾಡಬೇಕೆ ಹೊರತು, ಸೃಷ್ಟಿ ನಿಯಮದ ವಿರುದ್ಧ, ಕೇವಲ ಗಂಡಸರಿಗೆ ಪ್ರತಿಕಾರಮಾಡುವ ಬುದ್ಧಿಯಿಂದ ಯಾವ ಚಳವಳಿಯನ್ನೂ ಮಾಡಬಾರದು. ಇದರಿಂದ ಹೆಣ್ಣುಮಕ್ಕಳ ಚಟುವಟಿಕೆಗಳಿಗೆ ಯಶಸ್ಸುಸಿಗದೆ ಹಾಸ್ಯಕ್ಕೆ ಮತ್ತು ಅಪಯಶಸ್ಸಿಗೆ ಕಾರಣವಾಗಿ ಎಲ್ಲರಿಗೂ ನಷ್ಟವುಂಟಾಗುವದು. ಈ ದೃಷ್ಟಿಯಿಂದ ವಿಚಾರಮಾಡಿದಲ್ಲಿ ಹೆಣ್ಣುಮಕ್ಕಳ ದೇಹದ ಮತ್ತು ಮನಸ್ಸಿನ ರಚನೆಯ ಮತ್ತು ಸ್ವಭಾವ ಪ್ರವೃತ್ತಿಗಳ ಬಗ್ಗೆ, ಅವರ ಕರ್ತವ್ಯ ಮತ್ತು ಹೊಣೆಗಾರಿಕೆಯ ಬಗ್ಗೆ ಅಶಾಸ್ತ್ರೀಯವಾದ ತಪ್ಪುತಿಳುವಳಿಕೆಯು ಹೋಗಿ, ನಿಜವಾದ ಶಾಂತಿ ಸಮಾಧಾನಗಳು ಸಿಗುವವು.

ಇನ್ನೊಮ್ಮೆ ಶ್ರೀಮತಿ ಮಹಾಲಕ್ಷ್ಮೀ ಕುವರಿಯವರ ಈ ಹೊಸ ಉಪಕ್ರಮಕ್ಕಾಗಿ ಜನರ ಪರವಾಗಿ ಅವರನ್ನು ಅಭಿನಂದಿಸಿ ಅವರ ಕನಸು ನನಸಾಗಲೆಂದು ಕೋರುವ.

ಧಾರವಾಡ
೨೯—೬—೫೦

ಡಾ. ವನವಿಹಾರಿ

# ಪ್ರಾರ್ಥನೋತ್ತರ ಭಾಷಣದ ಸಾರದ

## ೨ನೇ ಭಾಗದ

## ಲೇಖಿಕೆಯ ಮುನ್ನುಡಿ

ಹೆಣ್ಣುಮಕ್ಕಳ ಹಿತದ ದೃಷ್ಟಿಯಿಂದ, ಅವರಿಗೆ ಅವರ ಸ್ವಂತದ, ಆದರೊಡನೆಯೇ ಜಗತ್ತಿನ ಅನುಭವ ಮಾಡಿಕೊಡಲು ಹೊರಟ ಈ ಪ್ರಾರ್ಥನೋತ್ತರ ಭಾಷಣಗಳೂ ಸಾರದ ಹೊತ್ತಿಗೆಯು ಈಗ ಹೊರಡುತ್ತಿರುವದು ಎರಡನೇ ಭಾಗವು. ಇದರಲ್ಲಿ ಒಂದು ಹೆಣ್ಣುಮಕ್ಕಳ ಸಂಸ್ಥೆಯಲ್ಲಿ ಪ್ರತಿದಿನ ಮುಂಜಾವಿನಲ್ಲಿ ಪ್ರಾರ್ಥನಾನಂತರ ಆದ, ಅನುಭವಿಕರೊಬ್ಬರ ಅನುಭವ ಪೂರ್ವಕ ನುಡಿಗಳ ಸಾರವಿದೆ. ಇದರಲ್ಲಿ ಯಾವದೇ ಒಂದು ಸಂಗತಿಯು ಒಂದೇ ಅಂಗವನ್ನು ಹಿಡಿದು ಹೇಳುತ್ತ ಹೊರಟಿಲ್ಲ. ಒಂದೇ ವಿಷಯನ್ನು ಎಷ್ಟುರೀತಿಯಿಂದ ವಿಚಾರಮಾಡಲು ಸಾಧ್ಯವೋ ಅಷ್ಟುರೀತಿಯಿಂದ ವಿಚಾರ ಮಾಡುತ್ತ ಹೊರಟಿರುವ ಮೂಲಕ ನಡುನಡುವೆ ಬೇರೆಬೇರೆ ವಿಷಯುಗಳು ಬಂದಂತೆ ಭಾಷವಾಗುವದು. ಕೆಲವಡೆ ಪ್ರಸಂಗಬಂದಂತೆ ಪರಿಸ್ಥಿತಿಗನುಸರಿಸಿ ಆಗಂತುಕ ಮಹತ್ವದ ವಿಷಯುಗಳ ಬಗ್ಗೆ ತಿಳಿಸುತ್ತ ಹೋಗಿರುವ ಮೂಲಕ ಮೊದಲು ಯಾವ ವಿಷಯುದ ಪ್ರಾರಂಭಮಾಡಿರುವರೋ ಅದು ಮುಂದೆ ಆಗಂತುಕ ವಿಷಯು ಮುಗಿದೊಡನೆ ಪುನಃ ಮುಂದೊರೆದಿದೆ. ಈ ಕಾರಣ ದಿಂದ ಓದುಗರಿಗೆ ವಿಷಯುದ ಅರ್ಥವು ಬೇಗನೆ ತಿಳಿದುಕೊಳ್ಳಲಾಗದೆ ಗೊಂದಲವಾಗುವ ಸಂಭವವಿದೆ.

ಇದರಲ್ಲಿಯ ವಿಷಯುವು ಜಗತ್ತಿನಲ್ಲಿ ನಿತ್ಯನಡೆಯುತ್ತಿರುವ ವಿಷಯ ವಾದರೂ ಸಹ ಜನರು ಅದಕ್ಕೆ ಮಹತ್ವಕೊಡದೆ, ಅದರ ಅಭ್ಯಾಸಮಾಡದೆ ಇರುವದರಿಂದ, ವಿಷಯುವು ಅಪರಿಚಿತವೆನಿಸಿ ಓದುಗರಿಗೆ ಅದರ ಅರ್ಥವಾಗ ಲಿಕ್ಕಿಲ್ಲ. ಇದರಿಂದ ಓದಲು ಸಹ ತಾತ್ಸಾರವೆನಿಸುವ ಪ್ರಸಂಗವಿದೆ. ಗಂಡಸರಿಗೆ ಈ ವಿಷಯುವು ಅಭ್ಯಾಸಮಾಡಲು ಅಷ್ಟಾಗಿ ರುಚಿಸುವದಿಲ್ಲ. ಹಾಗೂ ಪರದುಃಖ ಶೀತಲವೆಂಬಂತೆ ಅಗತ್ಯವೂ ಇಲ್ಲ. ಹೆಣ್ಮಕ್ಕಳಿಗಂತೂ ಅದರ ಜ್ಞಾನವೇ ಇಲ್ಲ ಹಾಗೂ ತನ್ನರಿವು ತನಗಿಲ್ಲ. ಹೀಗಾಗಿ ಜಗತ್ತಿನಲ್ಲಿ

ಇದಕ್ಕೆ ಎಲ್ಲರದೂ ಅಲಕ್ಷ್ಯವು ಹೆಚ್ಚಾಗಿ, ಯಾರಾದರೂ ಇಂಥ ವಿಚಾರ ಮಾಡಿದರೆ, ಮಾತಾಡಿದರೂ ಸಹ, ಅವರ ಸಲುವಾಗಿ ಜನರ ಭಾವನೆಯು ವಿಪರೀತವಾಗುವ ಸಂಭವವಿದೆ. ಹೆಣ್ಣುಮಕ್ಕಳ ವಿಷಯವೆಂದರೇ ಇಷ್ಟು ಗಹನವಾಗಿದೆಯಲ್ಲಾ! ಅದರ ನಿಜದರಿವು ಆಗಲು ಯಾರಿಗೂ ಸಾಧ್ಯವಿಲ್ಲ. ಅದಷ್ಟು ಗಹನವಾಗಲು ಕಾರಣವೆಂದರೆ, ಹೆಣ್ಣು ಸ್ವತಃ ತನ್ನ ಬಗ್ಗೆ ವಿಚಾರ ಮಾಡಿ, ತನಗಾಗುತ್ತಿರುವ ಅನ್ಯಾಯವನ್ನು ಬಿಚ್ಚಿಡಲು ತಯಾರಿಲ್ಲ. ಅಪ ವಾದಾತ್ಮಕವೆಂದು ಯಾವದೇ ಹೆಣ್ಣು, ತಿಳಿದು ಹೇಳಹೋದರೆ, ಹಿಂದಿನ ರೂಢಿಗೆ ಬಲಿಬಿದ್ದ, ವಿಶಾಲದೃಷ್ಟಿಯಿಂದ ವಿಚಾರಮಾಡದೆ, ದುಡುಕು ಸ್ವಭಾವದ ಗಂಡಸರು ಸಿಟ್ಟಿಗೆದ್ದು, ತಮ್ಮ ತಲೆಕೆಡಿಸಿಕೊಂಡು ಬಯ್ಯುತ್ತಿರು ತ್ತಾರೆ. ಬಾಯಿಗೆ ಬಂದಂತೆ ಅನ್ನಲು ಸಹ ಹಿಂಜರಿಯುವದಿಲ್ಲ. ಇದಕ್ಕೆ ಪ್ರತ್ಯಕ್ಷ ಉದಾಹರಣೆ ಬೇಕೆಂದರೆ ಜಯಕರ್ನಾಟ ೨೮—೯—೫೦ ನೇ ವಾರಸಂಚಿಕೆಯಲ್ಲಿನ ಅಣ್ಣನ ಓಲೆಯೊಂದಕ್ಕೆ ತಂಗಿಯೊಬ್ಬಳು ತಾ. ೩೦—೧೧—೫೧ ನೇ ದಿನದ ಅದೇ ವಾರಪತ್ರಿಕೆಯಲ್ಲಿ ವಿಚಾರಯುಕ್ತವಾಗಿ ಮರು ಪ್ರಶ್ನೆ ಕೇಳಿದ ಬಗ್ಗೆ, ಅವಿಚಾರದಿಂದ ತಲೆಕೆಡಿಸಿಕೊಂಡ ಮೂರನೆಯ ತರುಣ ರೊಬ್ಬರು "ಇಲ್ಲದ ಬುದ್ಧಿಯನ್ನು ಹೆಣ್ಣುಗಳಿಗೆ ಕಲಿಸಿ, ಜಗತ್ತನ್ನು ಅಧಃ ಪಾತಕ್ಕೆ ತಳ್ಳುವ ಪ್ರಯತ್ನ ಮಾಡುವ ನೀನು, ಜೀವಂತವಿದ್ದು ನಿನ್ನ ವಿಚಾರ ವನ್ನು ಹರಡಿ ಹೆಣ್ಣಿನ ತಲೆಕೆಡಿಸುವ ಬದಲು, ಸತ್ತು, ಗಂಡಸರಿಗೆ ಉಪಕಾರ ಮಾಡು" ಎಂದು ಹೇಳಿದ್ದಾರೆ. ಇಂಥ ಪ್ರಸಂಗಗಳು ಇನ್ನೂ ಎಷ್ಟೋ ಇರುವವು. ಇರಲಿ.

ಈಗ : ನಡೆದಿರುವ ಹೆಣ್ಣುಮಕ್ಕಳ ಎಷ್ಟೋ ಚಟುವಟಿಕೆಗಳು, ನಿಜ ವಾಗಿ ಗಂಡಸರ ವಿರುದ್ಧ ಈರ್ಷ್ಯ ದೃಷ್ಟಿಯಿಂದಿದ್ದುದೂ, ಕೇವಲ ಅವ ರನ್ನು ಪ್ರತಿಯೊಂದು ವಿಷಯದಲ್ಲಿ ಎದುರಿಸಬೇಕು, ಪ್ರತೀಕಾರಮಾಡಬೇಕು, ಎಂಬ ಉದ್ದೇಶದಿಂದಲೇ ಇದ್ದುದು ಕಂಡುಬರುತ್ತಿದೆ. ಇದರಿಂದ ಹೆಣ್ಣು
೨ ಚಟುವಟಿಕೆಗಳಿಗೆ ಯಶಸ್ಸಿಗದೆ, ಇದ್ದ ಪರಿಸ್ಥಿತಿಯಲ್ಲೇ ಅಪಹಾ ಸ್ಯಕ್ಕೆ ಗುರಿಯಾಗುವ ಪ್ರಸಂಗವಿದೆ. ಆದ್ದರಿಂದ ಹಾಗೆ ಮಾಡದೆ, ಗಂಡಸರ ಅಧಿಕಾರವನ್ನು ಹೆಂಗಸರು ಕಸಿದುಕೊಳ್ಳುವ ಉದ್ದೇಶದಿಂದ ಚಳುವಳಿ

ಹೊಡದೆ, ಯಾವ ತಮ್ಮ ಹಕ್ಕನ್ನು ತಾವು ಯಾವದೇ ಅಜ್ಞಾನಕ್ಕೆ ಸಿಕ್ಕು ಬಿಟ್ಟು ನಿಂತಿರುವರೊ ಆ ಹಕ್ಕನ್ನು ಪುನಃ ಈಗ ಸಂಪಾದಿಸಿಕೊಳ್ಳಲು, ನಿಸರ್ಗ ನಿಯಮದ ತಳಹದಿಯ ಮೇಲೆ ನಿಂತು ಹೋರಾಡಬೇಕೆಂಬ ಉದ್ದೇಶ ವನ್ನು ಗಳಿಸಿಕೊಡುವ ವಿಚಾರದಿಂದ ಈ ಪುಟ್ಟ ಹೊತ್ತಿಗೆಯು ಹೊರ ಟಿರುವದೇ ಹೊರ್ತು, ಹೆಣ್ಣುಮಕ್ಕಳು ಹೊಸ ಉಪಕ್ರಮಗಳನ್ನು ಹೂಡಿ, ಗಂಡಸರ ವಿರುದ್ಧ ಈರ್ಷಾಬುದ್ಧಿಯಿಂದ ಹೋರಾಡಬೇಕೆಂದು ಹೇಳುವ ಉದ್ದೇಶದಿಂದ ಹೊರಟಿಲ್ಲ ಆದರೆ ಮೊದಲೇ ಹೇಳಿದಂತೆ ವಿಷಯವು ಎಲ್ಲರಿಗೂ ಅಪರಿಚಿತವಿರುವದರಿಂದ, ಭಾಷಣಕಾರರು ಎಷ್ಟೇ ಸರಳ ರೀತಿ ಯಿಂದ ತಿಳಿಸಿಹೇಳಿದರೂ ಸಹ, ಅದನ್ನು ಸಂಪೂರ್ಣ ಗ್ರಹಣಮಾಡಲು ನನ್ನಿಂದ ಸಾಧ್ಯವಾಗದೆ, ಕೆಲವೆಡೆ ನನ್ನ ಬರಹದಲ್ಲಿ, ಅವರ ವಿಚಾರದ ನಿಜದರಿವಾಗದಂತಾಗಿದೆ. ಇದರಿಂದ ಓದುಗರಿಗೆ ವಿಷಯದ ವಿಪರೀತ ಕಲ್ಪನೆಯಾಗುವಂತಾಗಿದೆ. ಓದುಗರು ಈ ಎಲ್ಲವನ್ನೂ ಲಕ್ಷ್ಯಕ್ಕೆ ತಂದ ಒಟ್ಟಾರೆ ಹೆಣ್ಣುಮಕ್ಕಳಿಗೆ ತನ್ನರಿವು ಮಾಡಿಕೊಡುವ ಉದ್ದೇಶದಿಂದ ಹೊರ ಟಿರುವ ಈ ಹೊತ್ತಿಗೆಯ ಕಡೆಗೆ ವಿಶಾಲದೃಷ್ಟಿಯಿಂದ ನಿರೀಕ್ಷಣೆ ಮಾಡಿ ನೋಡಬೇಕೇ ಹೊರ್ತು, ತಮ್ಮನ್ನು ಬೈದಿರುವರೆಂದು ಯಾರೇ ಗಂಡಸರು ತಿಳಿಯಬಾರದಾಗಿ ವಿನಂತಿ.

ನನ್ನ ಈ ಉದ್ದೇಶವು ಯಾವ ರೀತಿಯಲ್ಲಿ ಸಫಲವಾಗುವದೋ ಹೇಳ ಲಾಗದಿದ್ದರೂ ಸಹ, ತಾವೆಲ್ಲ ಓದುಗರೂ ನನ್ನ ಈ ಕೃತಿಗೆ ಇನ್ನು ಮುಂದಡಿ ಇಡಲು ಪ್ರೋತ್ಸಾಹಿಸಿ, ನನ್ನೀ ಅಲ್ಪ ಕಾರ್ಯಕ್ಕೆ ಮಾರ್ಗ ದರ್ಶನ ಮಾಡಿಕೊಡುವಿರಾಗಿ ನಂಬಿರುವೆ.

**ಅಭಾರ ಮನ್ನಣೆ**

ಭಾಷಣಕಾರರು ತಾವು ಸ್ವತಃ ವಯಸ್ಸಾದವರಿದ್ದು ಚಳಿ, ಮಳೆ, ಗಾಳಿ ಎನ್ನದೆ ಪ್ರತಿದಿನ ಮುಂಜಾನೆ ೪-೩೦ ಘಂಟೆಗೆ ಸರಿಯಾಗಿ ನಮ್ಮ ಪ್ರಾರ್ಥನಾ ಮಂದಿರಕ್ಕೆ ಬಂದು ಅನುಭವೋಕ್ತಿಗಳನ್ನು ಬಹಳೇ ಲವಲವಿ ಕೆಯಿಂದ ತಪ್ಪದೆ ಹೇಳುತ್ತಿದ್ದುದಲ್ಲದೆ, ನನ್ನ ಬೇಡಿಕೆಯನ್ನು ಸ್ವೀಕರಿಸಿ ತಮ್ಮಾ ನುಡಿಗಳನ್ನು ಸಂಗ್ರಹಿಸಿ ಅವುಗಳನ್ನು ಈ ಕೃತಿಯ ರೂಪದಿಂದ ಬೈಲಿಗೆ ತರಲು ಅನುಮತಿಕೊಟ್ಟ ಬಗ್ಗೆ ಭಾಷಣಕಾರರಿಗೂ,

ತಮ್ಮ ಎಷ್ಟೋ ಜನ, ಹಿತಚಿಂತಕರ ವಿರೋಧವನ್ನು ಸಹ ಲಕ್ಷಿಸದೆ, ನಷ್ಟ ಸಹಿಸಿ, ನನ್ನ ಈ ಭಾಷಣಗಳ ಸಂಗ್ರಹವನ್ನು ತಮ್ಮ **ಲೋಕಮಿತ್ರ** ವಾರಪತ್ರಿಕೆಯ ಮುಖಾಂತರ ಪ್ರಸಿದ್ಧಿಸಿದ ಬಗ್ಗೆ ಹಾಗೂ ಅದನ್ನೇ ಈ ಪುಟ್ಟ ಹೊತ್ತಿಗೆಯ ರೂಪದಲ್ಲಿ ಅಚ್ಚು ಹಾಕಿಸಿ ಈ ಕೃತಿಯು ಬೈಲಿಗೆ ಬೀಳಲು ಸಹಾಯಮಾಡಿದ ಬಗ್ಗೆ ಶ್ರೀ. ಚಂದ್ರೋದಯ ಮುದ್ರಣಾಲಯದ ಒಡೆಯರಿಗೂ,

ನಾನು ಊರಿನಲ್ಲಿಲ್ಲದ ಸಮಯದಲ್ಲಿ, ನನ್ನ ಬಿನ್ನಹದ ಮೇರೆಗೆ ಭಾಷಣಕಾರರ ಭಾಷಣದ ಟಿಪ್ಪಣಿ ತೆಗೆದು ನನ್ನ ಕಾರ್ಯಕ್ಕೆ ನೆರವಾದವರಿಗೂ ಹಾಗೂ ನಾನು ತೆಗೆದ ಟಿಪ್ಪಣಿಯನ್ನು ವೇಳೆವೇಳೆಗೆ ಮುದ್ರಣಾಲಯಕ್ಕೆ ಕಳುಹಿಸುವಂತೆ ಅಚ್ಚುಕಟ್ಟಾಗಿ ಬರೆದು, ಸಹಾಯ ನೀಡಿದವರಿಗೂ,

ಈ ಪುಸ್ತಕದ ಮೊದಲನೇ ಭಾಗಕ್ಕೆ ಮುನ್ನುಡಿ ಬರೆದ ಡಾ. ವನವಿಹಾರಿಯವರಿಗೂ ನನ್ನ ಕೃತಿಯ ಗುಣದೋಷಗಳನ್ನು ಬೈಲಿಗೆಳೆದು ಮುಂದಿನ ಹಾದಿಯಲ್ಲಿ ಮಾರ್ಗದರ್ಶಕರಾಗಲು ಸಹಾಯ ನೀಡಿದ ಟೀಕಾಕಾರರಿಗೂ, ವಿಮರ್ಶಕರಿಗೂ ಅಂದರೆ ಮುಖ್ಯವಾಗಿ (೧) ಸಂಪಾದಕರು ಸಂದೇಶ (೨) ಸಂಪಾದಕರು ಕಲಿಯುಗ (೩) ಸಂಪಾದಕರು ಕಥಾವಳಿ ಹಾಗೂ ಟೀಕಾಕಾರರೊಬ್ಬರಿಗೆ ಪ್ರತಿಯುತ್ತರಿಸಿದ ಶ್ರೀ. ಸರೋಜಿನಿ ತಾಯಿಯವರಿಗೂ, ವಿಶೇಷವಾಗಿ ವಿಶಾಲ ಕರ್ನಾಟಕ ದಿನಪತ್ರಿಕೆಯಲ್ಲಿನ ಶ್ರೀ. ಡೀ. ಡೀ. ಟಿ. ಯವರಿಗೂ,

ಹಾಗೂ ಜ್ಞಾತ ಅಜ್ಞಾತ ರೀತಿಯಿಂದ ಸಹಾಯ ನೀಡಿದ ಪ್ರೋತ್ಸಾಹಕೊಟ್ಟ ಎಲ್ಲ ಹಿತಚಿಂತಕರಿಗೂ ಆಭಾರಿಯಾಗಿದ್ದೇನೆ. ಹಾಗೂ ಮೊದಲನೇ ನನ್ನ ಈ ಪ್ರಯತ್ನದಲ್ಲಿ ಎಷ್ಟೋ ತಪ್ಪಿದ್ದರೂ ಸಹ ಅದನ್ನು ಅಪರಾಧವೆಂದೆಣಿಸದೆ, ಹಿಂದಿನಂತೆ ಮುಂದಾದರೂ ನನ್ನ ಈ ಬಾಲ ಕೃತಿಯಲ್ಲಿನ ಗುಣದೋಷಗಳನ್ನು ತಿದ್ದಿಕೊಳ್ಳಲೆಂಬ ಉದಾರ ದೃಷ್ಟಿಯಿಂದ ತೋರಿಸಿಕೊಟ್ಟು, ನನ್ನ ಮುಂದಿನ ಕಾರ್ಯಕ್ಕೆ ಓದುಗರೆಲ್ಲರೂ ನೆರವಾಗುವಿರೆಂದಾಶಿಸುವ.

ಮಹಲಕ್ಷ್ಮೀ ಕುವರಿ

# ಅರ್ಪಣ ಪತ್ರಿಕೆ

ಅನಂಗರಂಗನಿಗೆ ತುತ್ತಾದವರಿಗೆ.

TO

The Victims Of Sex

# ಒಂದು ಹೆಣ್ಣುಮಕ್ಕಳ ಸಂಸ್ಥೆಯಲ್ಲಿಯ ಪ್ರಾರ್ಥನೋತ್ತರ ಭಾಷಣಗಳ ಸಾರಗಳು

ಲೇಖಿಕಾ:— ಶ್ರೀ. ಮಹಲಕ್ಷ್ಮೀ ಕುವರಿ

೧೫-೧೨-೪೭:— ಇಷ್ಟೆಲ್ಲ ಆಗಿ ಸಭೆಯು ಸಾಂಗವಾಯಿತು. ಆದರೆ ಸಾಮಾನ್ಯ ಜನರು ಗೆದ್ದೆತ್ತಿನ ಬಾಲಹಿಡಿಯುವವರಿರುತ್ತಾರೆ. ಅಂತೂ ಸಭೆಯು ಮುಗಿದನಂತರ ಒಬ್ಬೊಬ್ಬರು ಒಂದೊಂದು ರೀತಿಯಿಂದ ಮಾತಾಡಹತ್ತಿದರು. ಕೆಲವರು ಸಂಸ್ಥೆಯನ್ನು ಬಯ್ಯುವವರು, ಕೆಲವರು ಒಳ್ಳೆಯದಾಯಿತೆನ್ನುವವರು. ಆ ಸಮಯದಲ್ಲಿ ಬೋರ್ಡ ಬರೆಸುವ ಕೆಲಸವನ್ನು ಮಾಡಿಸಲು ೪೦-೫೦ ರೂ. ವೆಚ್ಚಮಾಡಿದರು. ಈ ರೀತಿ ಮಾಡುವದು ಶ್ರೀಮಂತರಿಗೆ ಯೋಗ್ಯವಾದದ್ದಾದರೂ ಸಹ ಅದನ್ನು ಇವರು ಪ್ರಚಾರಕ್ಕೆಂದು ಮೊದಲು ಮಾಡಲು ಪ್ರಾರಂಭಿಸಿದರು. ಇನ್ನು ಇಲ್ಲಿ ಕಲಿಸಲು ಯಾವ ಶಿಕ್ಷಕರನ್ನು ತರಬೇಕೆಂದು ವಿಚಾರವಾಯಿತು. ಬಿ. ಎ., ಎಂ. ಎ. ಕಲಿತವರನ್ನು ತಂದರೆ ಅವರು ಇಲ್ಲಿ ಏನು ಕಲಿಸಬೇಕೆಂಬ ಯೋಚನೆ; ಪೆನಶನ್ನದಾರರನ್ನು ತಂದರೆ ಅವರು ಕ್ಲಾಸಿನಲ್ಲಿ ತೂಕಡಿಸುತ್ತಾರೆಂಬ ತಕರಾರು. ಹರೆಯದವರು ಬರುವಂತಿಲ್ಲ. ಆದರೆ ಯಾರೂ ಇಲ್ಲಿ ತಮ್ಮ ಸ್ವಾರ್ಥವನ್ನು ಬಿಟ್ಟು ರೊಕ್ಕದ ಆಶೆಯಿಲ್ಲದೆ ಕೆಲಸ ಮಾಡಲು ಮುಂದೆ ಬರುವಂತಿಲ್ಲ. ಇಂಥ ಪರಿಸ್ಥಿತಿಯಲ್ಲಿ ಏನು ಮಾಡಬೇಕು? ಆದರೆ ಈಗ ಪರಿಸ್ಥಿತಿಯು ಎಷ್ಟೋ ನೋಡುವಂತಿದ್ದಾಗ್ಯೂ ಮಾಸ್ತರನ್ನು ತಂದಿಟ್ಟರೆ ಅಭ್ಯಾಸ ಬರುವದಿಲ್ಲೆಂದು ತಕರಾರು ಇರುವಾಗ, ಆಗಿನ ಪರಿಸ್ಥಿತಿಯಲ್ಲಿ ಹೇಗಿರಬೇಕೆನ್ನುವದನ್ನು ವಿಚಾರ ಮಾಡಿದರೆ ತಿಳಿಯುವದು. ಆಗಿನ ಹುಡುಗಿಯರು ಅಭ್ಯಾಸ ಮಾಡುವದಿಲ್ಲೆಂಬ ಮಾಸ್ತರರ ತಕರಾರು. ಮಾಸ್ತರರು ಸರಿಯಾಗಿ ಅಭ್ಯಾಸ ಹೇಳದೆ ಬಾಯಿಗೆ ಬಂದತೆ ಬಯ್ಯುತ್ತಾರೆಂಬ ಹುಡುಗಿಯರ ತಕರಾರು ಈ ರೀತಿ.

೧೬-೧೨-೪೭:— ಅಂತೂ ಇಂತೂ ನಾಲ್ಕಾರು ಹುಡುಗಿಯರು ಆ ಸಂಸ್ಥೆಯಲ್ಲಿ ಬರಲೊಪ್ಪಿದ್ದರಿಂದ ಆ ವೇಳೆಯಲ್ಲಿ ಅವರು ನಮ್ಮ ಮೇಲೆ ಎಷ್ಟೋ ಉಪಕಾರ ಮಾಡಿದಂತಾಯಿತು. ಸಭೆಯ ಸಮಾರಂಭವು

ಮುಗಿದನಂತರ ಶ್ರೀ. ದಾ. ಇವರು ಹೊರಗೆ ಹೋಗುತ್ತಿರುವಾಗ ಹಾದಿಯಲ್ಲಿ ಶ್ರೀ. ಹು. ಶ್ರೀ. ಕ. ಭೆಟ್ಟಿಯಾದರು ಮೂವರು ಕೂಡಿ ಮಾತಾಡುತ್ತಾ ಒಂದೆಡೆ ಕುಳಿತರು ಶ್ರೀ. ಹು. ಇವರು ಶ್ರೀ. ಕ ಅವರಿಗೆ "ನೀವು ಈ ಸಂಸ್ಥೆಯ ಸ್ಥಾಪನೆಗೆ ವಿರುದ್ಧವಾಗಿ ಸಹಿಕೊಟ್ಟಿದ್ದು ತಪ್ಪೆಂದು ಹೇಳಲು" ಅವರಾದರೂ ಒಪ್ಪಿಕೊಂಡರು. ಶ್ರೀ. ದಾ. ಇವರು ಸಂಸ್ಥೆಯ ಎಲ್ಲ ಸಂಗತಿಯನ್ನು ಅವರಿಗೆ ತಿಳಿಸಿಹೇಳಿದರು. ಇಂಥ ಸರಳ ಹಾಗೂ ಉದಾರ ಸ್ವಭಾವದವರಾದ ಶ್ರೀ ಕ. ಇವರು ಇರುವದರಿಂದ ಈಗ ಅವರು ಇಷ್ಟು ಘನತೆಗೇರಿದ್ದಾರೆ. ವಿಚಾರಮಾಡಿ ಕೈಹಾಕುವವರು, ತಪ್ಪು ತಿಳಿದ ಕೂಡಲೇ ಒಪ್ಪಿ ತಿದ್ದಿಕೊಳ್ಳುವರು. ಕೆಲವರು ತಪ್ಪು ತಿಳಿದರೂ ಕೂಡ ತಮ್ಮ ಹಟಮಾರಿತನದಿಂದ ಅದನ್ನೇ ಸಾಧಿಸುವರು. ಕೆಲವರು ಇಂಥ ಹಟಮಾರಿ ಜನರು ಇತರರಕೂಡ ಸಹಕಾರ ಮಾಡದಿರುವದರಿಂದ ಅವರು ಎಷ್ಟೇ ಯೋಗ್ಯತೆಯುಳ್ಳವರಿದ್ದರೂ ಕೂಡ ಗೂಗೆಯಂತೆ ಹಿಂದೆ ಬಿದ್ದು ಮತ್ಸರದಿಂದ ಬಳಲುತ್ತಿರುವರು. ಮತ್ತು ನಿರಸ್ತಪಾದಪೆ ದೇಶೇ ಏರಂಡೋಽಪಿ ದ್ರುಮಾಯತೆ ಎಂಬಂತೆ ಅವರ ಕೊರಳಲ್ಲಿ ಮುಖಂಡತ್ವ ಬಿದ್ದರೂ ಅದು ಬಹಳ ದಿನ ಉಳಿಯಲಾರದು.

೧೭–೧೨–೪೭:— ಈ ಪ್ರಕಾರವಾಗಿ ಒಂದೊಂದೇ ಹುಡುಗಿಯರನ್ನು ಕೂಡಿ ಹಾಕುವ ಪ್ರಯತ್ನ ನಡೆದಿತ್ತು. ಉದ್ದೇಶ ಪತ್ರಿಕೆಗಳನ್ನು ಹಂಚುವದು, ಸ್ವಲ್ಪಾದರು ಚಂದಾ ಕೊಡುವವರೇನೆನ್ನುವರನ್ನು ನೋಡುವದು, ಹೀಗೇ ಇವರ ಕೆಲಸ ನಡೆದಿತ್ತು. ಆ ಸಮಯದಲ್ಲಿ ಶ್ರೀ. ಮಾ. ಇವರು ಹಾಡುವದು, ಹಾಡುಕಲಿಸುವದು, ಕಾಗದದ ಹೂ ಕತ್ತರಿಸುವದು, ಹುಡುಗಿಯರಿಗೆ ಅದನ್ನು ಹೇಳಿಕೊಡುವದು, ಶ್ರೀ. ದಾ. ಇವರು ಅಭ್ಯಾಸ ಹೇಳುವದು ಹೀಗೆ ನಡೆದಿತ್ತು. ಬೇರೆಬೇರೆಯವರನ್ನು ಕರೆತಂದರೆ ಅಭಿಪ್ರಾಯ ಬರೆಸಿಕೊಳ್ಳುತ್ತಿದ್ದರು. ಒಮ್ಮೆ ಶ್ರೀ. ಕ. ರನ್ನು ಕರೆತಂದು ತೋರಿಸಲಾಯಿತು. ಸಂಸ್ಥೆಯ ಲೈಬ್ರರಿಯಲ್ಲಿ ಜನರಿಗೆ ಮೆಚ್ಚಿಗೆಯಾಗುವಂತಹ ಪುಸ್ತಕಗಳನ್ನು ಇಟ್ಟಿದ್ದರು. ಮತ್ತು ಒಳ್ಳೆ ಸಾಮಾನುಗಳು ಒಳ್ಳೇ ಶಿಸ್ತಿನಿಂದ ಇಡಲಾಗಿದ್ದವು, ವಿದ್ಯಾರ್ಥಿನಿಯರನ್ನು ನೋಡಿದರೆ ಕೆಲವರು ಒಳ್ಳೆ ಮನೆತನಸ್ಥರು ಮತ್ತು ಕೆಲವರು ಚಂಚಿಯೊಡನೆ ಬಂದು ಎಲೆ ಅಡಿಕೆ ಹಾಕುವವರು.

ಕೆಲವರು ಬಂದೊಡನೆ ಅವರ ಹಿಂದಿನಿಂದ ಮತ್ತೊಬ್ಬರು ಬಂದು ಅವಳು ತನ್ನ ಪ್ರಿಯಕರನ ಕೂಡ ಜಗಳಾಡಿ ಬಂದಿರುವಳೆಂದು ಹೇಳುವರು. ಕೆಲವರು, ರಸ್ತೆಯಲ್ಲಿ ನಿಂತು ಜಗಳಾಡುತ್ತಿದ್ದರಿಂದಲೂ ಊರಿನ ಜನರೆಲ್ಲ ಸಂಸ್ಥೆಗೆ ಹೆಸರಿಡಹತ್ತಿದರು. ಅಲ್ಲದೆ ಮನೆತನಸ್ಥ ಹೆಣ್ಣು ಮಕ್ಕಳು ಬಿಡಲು ಸಿದ್ಧರಾದರೂ. ಇದು ಈ ರೀತಿ ನಡೆದಿದ್ದರಿಂದ ಮೊದಲೇ ವಿರುದ್ಧವಿದ್ದ ಶ್ರೀ. ಕ ಅವರು ಅಭಿಪ್ರಾಯದ ಪುಸ್ತಕದಲ್ಲಿ ಹೆಚ್ಚಿಗೆ ಏನೂ ಬರೆಯದೆ ಕೇವಲ ಈ ಸಂಸ್ಥೆಯು ಉದ್ಬೋಧಕ ಪುಸ್ತಕಗಳು ಇವರ ವಾಚನಾಲಯದಲ್ಲಿರುತ್ತವೆಂದು ಬರೆದರು. ಅದಕ್ಕೆ ಸಹ ಜನರು ಅವರನ್ನು ಬಹಳ ಹಿಡಿಸಿದರು. ಮೊದಲೇ ವಿರುದ್ಧವಾಗಿ ಸಹೀ ಕೊಟ್ಟು ಆಗ ಹೆಚ್ಚಾಕ್ಕಾಡುತ್ತಾರೆಂದು

೧೨-೧೨-೪೭:— ಯಾವ ಕೆಲಸಕ್ಕಾದರೂ ವ್ಯವಹಾರ ಚಾತುರ್ಯ ಬೇಕಾಗಿರುತ್ತದೆ. ನಮ್ಮ ಕಾರ್ಯದ ಬೇಗನೆ ಪ್ರಚಾರ ಆಗಬೇಕೆಂದು ಗಡಿಬಿಡಿ ಮಾಡಿದರೆ ಅದಕ್ಕೆ ವಿಘ್ನ ಬರುತ್ತದೆ ವಿರೋಧಕರು ವಿರೋಧ ಮಾಡುವ ಹಂಚಿಕೆಯಲ್ಲಿ ಇರುತ್ತಾರೆ. ಕೆಲವು ಕೆಲಸಗಳಂತೂ ಮೊದಲು ಜನರಿಗೆ ವಿವರವಾಗಿ ತಿಳಿಯುವಂತೆ ಮಾಡುವದರಿಂದ ಬಹಳ ಕೆಟ್ಟ ಪರಿಣಾಮ ಆಗುತ್ತದೆ. ಯಾವದೇ ಒಂದು ಕೆಲಸ ಮಾಡುವವರಿಗೆ ಪ್ರೋತ್ಸಾಹ ಕೊಡುವದಕ್ಕಿಂತ ವಿಘ್ನತರುವ ಜನರೇ ಬಹಳ ಇರುತ್ತಾರೆ. ನಮ್ಮಲ್ಲಿದ್ದ ಒಂದು ಗುಣದ ವಿಕಾಸವಾಗುವದಕ್ಕಿಂತ ಮೊದಲು ಅದರ ಮೊಳಕೆಯಲ್ಲಿಯೇ ನಾವು ಅದನ್ನು ಜನರೆದುರಿನಲ್ಲಿ ಪ್ರದರ್ಶಿಸಿದರೆ ಅದರಿಂದ ಎಷ್ಟೋ ತ್ರಾಸು ಆಗುತ್ತದೆ. ಕೆಲವೇಳೆ ಮೊಳಕೆಯು ಅಲ್ಲೇ ಮುರಿಯುವದು, ಅಥವಾ ಕಮರುವ ಪ್ರಸಂಗ ಬರುತ್ತದೆ. ಮುಂದೆ ಆರು ತಿಂಗಳಲ್ಲಿ ೪೫ ಜನ ವಿದ್ಯಾರ್ಥಿನಿಯರು ಕಲಿಯಲು ಬರುತ್ತಿದ್ದರು, ಹಿಂದೆ ಹೇಳಿದ ಆ ನರ್ಸಳು ಸ. ಜಕ್ಕೆ ಹತ್ತಾರು ಜನರನ್ನು ಕೆಲಸಗಾರರೆಂದು ಆದರೆ ಕಲಿಯಲು ಕಳಿಸಿದಳು. ಅವರೆಲ್ಲರೂ ಇತ್ತ ವಿದ್ಯಾರ್ಥಿನಿಯರಂತೆಯೂ ಕೆಲಸಗಾರರಂತೆಯೂ ಇರಹತ್ತಿದರು. ಇಲ್ಲಿಯು ಒಬ್ಬ ಹೆಣ್ಣುಮಗಳು ಹರುಕುಮುರುಕು ಹೊಲಿಗೆ ಕಲಿತವಳಿದ್ದು ಅವಳು ನಮ್ಮಲ್ಲಿಗೆ ಬಂದು

ಸೇರಿದಳು. ಅವಳು ಹೊಲಿಗೆ ಕಲಿಸುವ ಮಾಸ್ತರಣಿ. ಅವಳಿಗೆ ತಿಂಗಳಿಗೆ ೧೦ ರೂ. ಪಗಾರ ಕೊಡುವ ವ್ಯವಸ್ಥೆ ಇತ್ತು. ಇವಳ ನಡತೆ ಸರಿ ಇಲ್ಲದ್ದರಿಂದ ಜನರು ಅವಳನ್ನು ಸ. ದಲ್ಲಿ ಕರೆತಂದಬಗ್ಗೆ ಟೀಕಿಸಹತ್ತಿದರು. ಮತ್ತು ಮಾ. ಯಾವರಾದರೂ ಅವಳನ್ನು ಸ. ದಲ್ಲಿ ಸೇರಿಸಲು ಜೀಡವನ್ನ ಹತ್ತಿದರು. ಅವಳು ಬಂದನಂತರ ಶಾಲೆಯಲ್ಲಿ ಜಗಳ, ರಗಳೆಗಳಿಗೆ ಪ್ರಾರಂಭ ಆಗಹತ್ತಿತು ಆ ಸಮಯದಲ್ಲಿ ಇಲ್ಲಿನ ಬೇರೆಬೇರೆ ಕಲಾವಿದರ, ಸಾಹಿತಿಗಳ ಸಹಾನುಭೂತಿಯು ಸ. ದ ಸಲುವಾಗಿತ್ತು. ಬೇರೆಬೇರೆ ಊರುಗಳಿಂದ ಬಂದ ಜನರು ಇಲ್ಲಿಯು ಕನ್ನಡ ಭಾಷೆ ಸಹ ಬರದೆ ಎಷ್ಟೋ ಜನರು ಬಂದು ಇಲ್ಲಿಯು ಕೆಲಸ ಬೊಗಸೆ ಆಚಾರ ವಿಚಾರಗಳನ್ನು ನೋಡಿ ಆನಂದ ವ್ಯಕ್ತಪಡಿಸುತ್ತಿದ್ದರು. ಅದರಲ್ಲಿ ಒಬ್ಬ ತೆಲಗು ವಿದ್ವಾಂಸರು ಇಲ್ಲಿಯ ಪುಸ್ತಕಗಳ ಮಾಹಿತಿಯನ್ನು ಕೇಳಿಕೊಂಡು (ಭಾಷೆ ಬಾರದ್ದರಿಂದ) ಅವುಗಳ ಮಹತ್ವವನ್ನು ಕಂಡು ಮುಂದೆ ಈ ಸ. ವು ಇದೇ ರೀತಿ ಗುರಿಯಿಟ್ಟುಕೊಂಡು ಹೋಂಟರೆ ಜಗತ್ ಪ್ರಸಿದ್ಧವಾಗಲು ಯಾವ ಅಡ್ಡಿಯಿಲ್ಲವೆಂದೂ, ರಾಷ್ಟ್ರೀಯ ಶಿಕ್ಷಣದ ಉಗಮವು ಇಲ್ಲಿಯೆ ಎಂದೂ ಉದ್ಗಾರ ತೆಗೆದರು. ಅವರೊಡನೆ ಶ್ರೀ. ವೆಂ. ಇವರು ಬಂದಿದ್ದು ಇವರು ನಮ್ಮ ಸಂಸ್ಥೆಗೆ ವಿರುದ್ಧ ಇದ್ದು ಈಗ ಇಲ್ಲಿಗೆ ಬಂದು ಭಿಡೆಗೆ ಬಿದ್ದುದರಿಂದ ಹಿಂದೆ ಶ್ರೀ. ಕಾ. ಇವರು ಬರದಂತೆ ಅಭಿಪ್ರಾಯದ ಪುಸ್ತಕದಲ್ಲಿ ಗೊಡ್ಡ ಹೊಗಳಿಕೆಯಿಂದ ಸಂಸ್ಥೆಯಬಗ್ಗೆ ಏನು ವ್ಯತ್ತವಾಗದಂತೆ ಬರೆದರು. ಹೀಗೆ ಮನುಷ್ಯನು ತನ್ನಸಮರ್ಥನೆ ಮಾಡುವಾಗ ಇಂಥ ಪ್ರಸಂಗಗಳಲ್ಲಿ ಇಕ್ಕಟ್ಟಿನಲ್ಲಿ ಬಿದ್ದಾಗ ತನ್ನ ಮನಃಸ್ಥಿತಿಯನ್ನು ಜನರ ಮುಂದೆ ಇಡಲು ನಾಚಿ ಸ್ವಾಭಿಮಾನದಿಂದ ಅಥವಾ ದುರಭಿಮಾನದಿಂದ ಹಿಂಜರಿದು ಜನರನ್ನು ಗೊಂದಲದಲ್ಲಿ ಹಾಕುತ್ತಾನೆ.

೧೯-೧೨-೪೭:— ಆರುತಿಂಗಳ ವರಧಿಯನ್ನು ಹುಡುಗಿಯರ ಸಂಖ್ಯೆ ಸ. ಕ್ಕೆ ಬಂದು ಹೋದವರ ಅಭಿಪ್ರಾಯ ಇವುಗಳನ್ನು ಹಾಕಿ ಛಾಪಿಸಲೂ ಊರಲ್ಲಿ ಗೊಂದಲ ಏಳಹತ್ತಿತು. ಅಭಿಪ್ರಾಯ ಪತ್ರದಲ್ಲಿ ಮೊದಲು ವಿರೋಧ ಮಾಡಿದವರ ಅಭಿಪ್ರಾಯ ಇದ್ದುದನ್ನು ನೋಡಿ ಅವರಪಕ್ಷದ ಬಾಕಿ ಉಳಿದವರು ಸಿಟ್ಟಿಗೆದ್ದರೂ. ಮೊದಲು ವಿರೋಧ ಪಕ್ಷದ ಮುಖಂಡರಾದ

ರಾದ ಶ್ರೀ. ಕ. ಇವರ ಅಭಿಪ್ರಾಯವು ಒರದಿಯಲ್ಲಿದ್ದ ಕೆಲವು ಜನರು ಅವ ರನ್ನು ಬಯ್ಯಹತ್ತಿದರು. ನಮ್ಮನ್ನು ಕೆಟ್ಟವರನ್ನುಮಾಡಿ ತಾವು ಸಾಚಾ ಆದರೆಂದು ಅನ್ನತೊಡಗಿದರು. ಬೇರೆ ಊರುಗಳಿಗೆ ವರ್ಗಣಿಸಲುವಾಗಿ ಹೋಗಬೇಕೆಂದು ಶೀ. ದಾ. ಇವರೆ ಅಲ್ಲಿಗೆ ಹೋಗಿ ತಮ್ಮ ಸ್ನೆಹಿತರನ್ನು ಸದಸ್ಯರನ್ನುಮಾಡಿ ಮತ್ತು ತಮ್ಮ ವರದಿಯಲ್ಲಿದಾತರರು ಎಂಥ ವಸ್ತುವನ್ನು ಕೊಟ್ಟರೂ ಸಹ ಅದನ್ನು ಸ್ವೀಕರಿಸುವೆವು ಎಂದು ಛಾಪಿಸಿದ್ದರಿಂದ ಕೆಲವರು ಹರಕು ಮುರಕು ಪುಸ್ತಕಗಳನ್ನು ಕೊಡಲೂ ಅವರು ಹೇಳಿ ದಷ್ಟು ರೂ. ಗಳ ಪಾವತಿಯನ್ನು ಕೊಡುತ್ತಿದ್ದರು. ಮೊದಲು ಹೀಗೆ ಮಾಡಿದ್ದರಿಂದಲೇ ಮುಂದೆ ಮುಂದೆ ಸಮಾಜವು ಬೆಳೆಯುತ್ತಹೋದಂತೆ ಜನ ರಿಂದ ಹೆಚ್ಚಿನ ಹಣದ ಸಹಾಯವಾದರೂ ಆಗಲು ಅನುಕೂಲವಾಯಿತು.

೨೦-೧೨-೪೭:— ಬೇರೆ ಬೇರೆ ಜನರ ಅಭಿಪ್ರಾಯ ತೆಗೆದುಕೊಂಡು ಅದರಲ್ಲಿ ಆರು ತಿಂಗಳ ವರದಿ ಪ್ರಕಟಿಸಲ್ಪಾಯಿತು. ಇದರಲ್ಲಿ ಇವರ ಸ್ವಾರ್ಥ ವಾಗಲೀ ಕೆಟ್ಟ ಬುದ್ಧಿಯಾಗಲೀ ಇರದು. ಕೇವಲ ಕಾರ್ಯ ನಡೆಯ ಬೇಕೆಂಬ ಹಂಬಲ ಒಂದೇ ಇತ್ತು. ಜನರು ವಿಚಾರ ಮಾಡದೆ ಯಾರ ಬೆನ್ನಾದರೂ ಹತ್ತುತ್ತಾರೆ. ಆದರಲ್ಲಿ ಕೆಟ್ಟದಿದ್ದರೂ ಸರಿಯೆ! ಒಳ್ಳೆಯ ದಿದ್ದರೂ ಸರಿಯೆ; ಹೀಗೆ ಇರುವದು ಅವರ ಮೂಢತನವೇ ಸರಿ. ಇಂಥ ವರು ಎಂದೂ ಮುಂದೆಬರಲಾರರು. ನಿಜವಾಗಿ ಸ್ವತಂತ್ರ ಯೋಜನೆ ಮಾಡಿ ಯಾರು ಮುಂದೆ ಹೆಜ್ಜೆ ಇಡುವರೋ ಅವರೇ ಮುಂದೆಬರುತ್ತಾರೆ. ಅವರಿಂದಲೇ ಏನಾದರೂ ಕಾರ್ಯ ಆಗುತ್ತದೆ. ಅವರೇ ತಮ್ಮ ಕಾರ್ಯದ ಸಲುವಾಗಿ ಸಾಯಲು ಸಿದ್ಧರಾಗುತ್ತಾರೆ. ಮ. ಗಾಂಧಿಯವರು ನೂಲಿ ನಿಂದ ಸ್ವರಾಜ್ಯ ಸಿಗುತ್ತದೆಂದು ಹೇಳುವಾಗ ಎಲ್ಲರೂ ಅವರನ್ನು ಹುಚ್ಚ ಎಂದರು. ಆದರೆ ಅವರ ಮಾತಿನಲ್ಲಿ ತಥ್ಯಾಂಶ ಇದೆಯೆಂದು ಎಷ್ಟೋ ದಿನಗಳ ಮೇಲೆ ತಿಳಿದುಬಂದಿತು. ನಂತರ ಎಲ್ಲರೂ ಅವರ ಬೆನ್ನುಹತ್ತಿದರು. ಆದರೆ ವಿಚಾರಮಾಡಿ ಕೆಲಸ ಕೈಕೊಂಡವರು ಅದರಲ್ಲಿ ನೂರಕ್ಕೆ ಹತ್ತು ಜನರು ಸಹ ಸಿಗಲಾರರು.

ಧಾ. ದಲ್ಲಿರುವ ಚಿಕ್ಕಂದಿನ ಪರಿಚಿತರಿಂದ ಶ್ರೀ. ಛಿ. ಇವರ ಅಭಿಪ್ರಾಯವನ್ನು ಹಾಕಿತ್ತು. ಅವರೇನು ಅಷ್ಟು ಯೋಗ್ಯತಾವಾನರಿರಲಿಲ್ಲ. ಅವರ ಇತಿಹಾಸವಾದರೂ ಬೇರೆ ಬೇರೆ ರೀತಿಯಲ್ಲಿ ಜನರಿಗೆ ತಿಳಿದಿತ್ತು. ಇದು ಬೇರೆ ಊರಿನ ಜನರಿಗೆ ಗೊತ್ತಿರದಿದ್ದರೂ ಮು. ದವರಿಗಾದರೂ ತಿಳಿದ ಮಾತಾಗಿತ್ತು. ಇವರ ಅಭಿಪ್ರಾಯವು ವರದಿಯಲ್ಲಿದ್ದುದರಿಂದ ಅಲ್ಲಿದ್ದ ವಕೀಲರು ಸಿಟ್ಟಿಗೆದ್ದು "ನಿಮ್ಮ ಸಂಸ್ಥೆಗೇಕೆ ಸಹಾಯ ಮಾಡಬೇಕೆಂದು" ಒದರಾಡಹತ್ತಿದರು. "ಇಂಥ ಇಂಥವರ ಅಭಿಪ್ರಾಯ ಕೊಡುತ್ತೀರಿ, ಇದರಿಂದ ನಿಮ್ಮ ಸಂಘದ ಯೋಗ್ಯತೆ ಗೊತ್ತಾಗುತ್ತದೆಂದು." ವಿಚಾರಮಾಡಿ ಸಹಾಯ ಮಾಡುವವರು, ಕೇವಲ ಸ್ವಲ್ಪ ಜನರಿರುತ್ತಾರೆ. ಆದರೆ ಒಬ್ಬರು ಮಾಡಿದಂತೆ ಮಾಡಬೇಕೆನ್ನುವವರೇ ಬಹಳ ಜನ ಸಿಗುತ್ತಾರೆ. ವಿಚಾರಮಾಡಿ ಸಹಾಯ ಮಾಡುವವರು ನಿಕ್ಕ ಜನರು ಎಷ್ಟೇ ಕೆಟ್ಟದೆಂದು ಹೆಸರಿಟ್ಟರೂ ಸಹ ಅವರ ಕಡೆಗೆ ನೋಡುವದಿಲ್ಲ. ಅವರಂತೆ ಕೊಡಬಾರದೆಂದು ನಿಶ್ಚಯ ಮಾಡಿದವರಾದರೂ ಬೇರೆ ಜನರು ಈ ಕಾರ್ಯದ ಸಲುವಾಗಿ ಎಷ್ಟೇ ಸಹಾನುಭೂತಿ ತೋರಿದಾಗ್ಯೂ ಸಹ ಅವರ ಕಡೆಗೆ ಲಕ್ಷಕೊಡುವದಿಲ್ಲ.

ಹೀಗಾಗಿ ಮು. ದಲ್ಲಿ ಕೇವಲ ಗೆಳೆಯರ ಹೊರತು ಒಬ್ಬರೂ ಸಹಾಯಮಾಡಲು ಮುಂದೆ ಬರಲಿಲ್ಲ. ನಂತರ ಶೀ. ದಾ. ಇವರು ಇಲ್ಲಿ ಸುಮ್ಮನೆ ವೇಳೆ ಕಳೆಯುವದು ಸರಿಯಲ್ಲವೆಂದು ಭಾವಿಸಿ ಅಲ್ಲಿಂದ ಗು. ಕ್ಕೆ ತಮ್ಮ ಆಪ್ತರ ಪತ್ರವನ್ನು ತೆಗೆದುಕೊಂಡು ಅವರ ಬೀಗರ ಕಡೆಗೆ ಹೋದರು. ಮೊದಲು ಹತ್ತಿರ ಇದ್ದವರು ಪೂರ್ವಗ್ರಹದೂಷಿತ ಕಲ್ಪನೆಗಳಿಂದ ಸಹಾಯ ಮಾಡದಿದ್ದರೂ ಹೆಚ್ಚಿಗೆ ಕಷ್ಟಪಟ್ಟು ದೂರಿನಿಂದಾಗಲೀ ಎಲ್ಲಿಂದಾದರೂ ಸಹಾಯ ದೊರಕಿಸಿ ಕೆಲಸಮಾಡಿದರೆ ಅದರ ಪ್ರತಿಕ್ರಿಯೆಯಾಗಿ ತಮ್ಮವರಾಗಲೀ ಹತ್ತಿರವಿದ್ದವರಾಗಲೀ ಆಮೇಲೆ ಸಹಾನುಭೂತಿ ತೋರಿಸಿ ಸಹಾಯ ಮಾಡುವರು. ಈ ಹಂಚಿಕೆಯಿಂದ ಶೀ. ದಾ. ಇವರು ಧಾ. ಂದ ಗು. ಕ್ಕೆ ಪ್ರಚಾರಕಾರ್ಯಕ್ಕಾಗಿ ಹೋದರು.

೨೧-೧೨-೪೭:— ಸಾಮಾನ್ಯವಾಗಿ ಕೆಲಸವಾಗಲು ಪ್ರಚಾರದ ಮಹತ್ವವಿರುತ್ತದೆ! ಈಗ ಕಾಂಗ್ರೆಸ್ಸಿನವರಾದರೂ ಪ್ರಚಾರ ಮಾಡುವದರಲ್ಲೇ ಹೆಚ್ಚು ಆಸಕ್ತರಾಗಿದ್ದಾರೆ. ಮೊದಲು ಈ ಕಾರ್ಯದಲ್ಲಿ ಹಣ ಲುಕ್ಸಾನ ಆದರೂ ಸಹ ಮುಂದೆ ಅದರ ಪ್ರಚಾರದಿಂದ ಎಷ್ಟೋ ಲಾಭವಾಗುವ ಸಂಭವವಿರುತ್ತದೆ. ಪ್ರಚಾರ ಮಾಡುವದರಿಂದ ಅದು ಕೆಟ್ಟದ್ದಿರಲಿ, ಒಳ್ಳೆಯದಿರಲಿ ಜನರ ಲಕ್ಷವು ಅದರ ಕಡೆಗೆಳೆಯುತ್ತದೆ. ಆದರ ಸಲುವಾಗಿ ಜನರಲ್ಲಿ ಕುತೂಹಲವುಂಟಾಗಿ ವಿಚಾರ ಮಾಡುವ ಬುದ್ಧಿ ಹುಟ್ಟಿ, ಅದರಲ್ಲಿಯ ನಿಜಾಂಶ ತಿಳಿದರೆ ಮುಂದೆ ಆ ಕಾರ್ಯಕ್ಕೆ ಜನರು ನೆರವಾಗುವ ಸಂಭವವೂ ಇರುತ್ತದೆ. ಒಂದು ಸಭೆ ಮಾಡಬೇಕಾದರೆ ವಿವಿಧ ಜನರ ಆವಶ್ಯಕತೆ ಇದೆ. ಒಂದು ಕಸ ಗೂಡಿಸುವವರು ಮೊದಲುಗೊಂಡು ಅಧ್ಯಕ್ಷರರಿಗೆ ಮಾಲೆ ಹಾಕುವವರ ತನಕ ಬೇರೆ ಬೇರೆ ಯೋಗ್ಯತೆಯುವರಿರ ಬೇಕಾಗುತ್ತದೆ. ಸುಭಾಷಿತಕಾರರು ಹೇಳಿರುವದೇನೆಂದರೆ ಒಬ್ಬ ಯಃಕಶ್ಚಿತ ಮನುಷ್ಯನಿಗೂ ಸಹ ಬೆಲೆಯಿದೆ, ಕಾರ್ಯಕರ್ತರು ತಾತ್ಸಾರ ಮಾಡಬಾರದು ಎಂದು.

ಈ :ನಮ್ಮ ಕಾಂಗ್ರೆಸ್ಸು ಆಡಳಿತದ ರಾಜಕಾರಣದಲ್ಲಿ ನಮಗೆ ಗೊತ್ತಿಲ್ಲದ ಎಷ್ಟೋ ಹೆಸರಿನ ಅಧಿಕಾರಿಗಳು ಬಂದಿರುತ್ತಾರೆ. ಇದರ ಅರ್ಥವೇನು? ನಮಗೆ ಜಗತ್ತಿನಲ್ಲಿ ನಡೆಯುವ ಯಾವ ವಿಷಯಗಳೂ ತಿಳಿದಿಲ್ಲವೆಂದು ದಿನವೂ ಬರುವ ವರ್ತಮಾನ ಪತ್ರವನ್ನೋದುವವರೆಷ್ಟೋ ಜನರು ಸಿಗುವರು. ಯಾರು ಯಾವ ಕೆಲಸ ಮಾಡುತ್ತಾರೆ, ಅವರಿಗೆ ಆ ಕೆಲಸದ ವಿಷಯಕ್ಕೆ ಗೊತ್ತಿದ್ದಷ್ಟು ಇತರರಿಗೆ ಗೊತ್ತಿರುವದಿಲ್ಲ. ಆದ್ದರಿಂದ ಮೆರವಣಿಗೆ ಉಪನ್ಯಾಸ, ಹಾಡು ಮುಂತಾದವುಗಳ ಮುಖಾಂತರ ಪ್ರಚಾರವಾದಷ್ಟು ಯಾವದೇ ಕಾರ್ಯದಲ್ಲಿ ಸಹಾಯ ಸಿಗುವದು. ಕಾರ್ಯ ಮತ್ತು ಪ್ರಚಾರಗಳು ಹೊಟ್ಟೆ ಮತ್ತು ಬೆನ್ನಿನಂತೆ. ಪ್ರಚಾರವಿಲ್ಲದೆ ಯಾವ ಕಾರ್ಯವೂ ನೆರವೇರುವದಿಲ್ಲ. ಈ ತತ್ವವನ್ನು ತಿಳಿದವರೇ ಈಗ ದೇಶದಲ್ಲಿ ಮುಖಂಡರಾಗಲು ಯೋಗ್ಯರು ಆಗಿರುತ್ತಾರೆ. ಪೂರ್ವ ಪ್ರಚಾರದ ಪ್ರಮಾಣಕ್ಕನುಸಾರವಾಗಿ ಮುಂದಿನ ಕಾರ್ಯಕ್ಕೆ ನೆರವು ಸಿಗುವುದು.

ವೆಚ್ಚ ವ್ಯರ್ಥವೆಂದು ತಿಳಿಯಲಾಗದು. ಆದರೆ ಅದಕ್ಕಾದರು ಮಿತಿ ಯುಂಟು. ಆ ನೆವದಿಂದ ಅಪವ್ಯಯವು ಸರಿಯಲ್ಲ ಶ್ರೀ. ತ. ಇವರು ಇಂಥ ರಾಜಕಾರಣದಲ್ಲಿ ಓಡಾಡಿದವರಿದ್ದುದರಿಂದ ಅವರು ಈ ತತ್ವದ ಮಹತ್ವ ವನ್ನು ಚೆನ್ನಾಗಿ ಅರಿತವರಿದ್ದರು. ಅವರು ಹೆಂಗಸರಲ್ಲಿ ಸಂಸ್ಥೆಯ ಪ್ರಚಾರವು ಜಾಸ್ತಿಯಾಗಿ ಅದರಿಂದ ಸಂಸ್ಥೆಗೇನಾದರೂ ಲಾಭವಾಗಬಹು ದೆಂದು ಶ್ರೀ. ತ. ಇವರು ಗೌರೀ ಹೂವಿಳ್ಯೆ ಮೊದಲಾದ ಕಾರ್ಯಗಳನ್ನು ಮಾಡಬೇಕೆಂದು ಸೂಚಿಸಿದರು ಇದರಿಂದ ಹಿಂದಿನ ಪರಿಸ್ಥಿತಿಯ ಧಾರ್ಮಿ ಕರ ಮನವನ್ನು ಈಗಿನವರ ಮನವನ್ನೂ ಎಳೆದುಕೊಳ್ಳಲು ಬರುವದೆಂದು ಅವರ ಹಂಚಿಕೆಯಾಗಿತ್ತು. ಮುಂದೆ ಇದರಿಂದ ಸ. ಕ್ಕೆ ಎಷ್ಟೋ ಉಪಯೋಗವಾಯಿತು.

೨೨-೧೨-೪೭:— ಪ್ರಚಾರ ಕಾರ್ಯವೆಂದರೆ ಕೆಳಗಿನ ಮೆಟ್ಟಲಿ ನಿಂದ ಮೇಲಿನ ಮೆಟ್ಟಲಿನವರೆಗೂ ಏರಬೇಕಾಗುತ್ತದೆ. ಬುದ್ಧಿ ಬೆಳೆಯ ಬೇಕಾದರೆ ವರ್ತಮಾನ ಪತ್ರ ಓದುವ ಚಟವಿರಬೇಕು. ಬೇರೆಬೇರೆ ಪುಸ್ತಕಗಳ ಅಭ್ಯಾಸಮಾಡಿ ವಿಚಾರ ಮಾಡುವಂಥವರಾಗಬೇಕು. ಶ್ರೀ. ಕು. ಬೇರೆಬೇರೆ ವಿಷಯಗಳ ಅಭ್ಯಾಸ ಮಾಡಿರುವದರಿಂದ ಅವರು ಎಲ್ಲ ವಿಷಯಗಳಲ್ಲಿಯೂ ತಜ್ಞರಾಗಿದ್ದಾರೆ. ಮ. ಗಾಂಧಿಯವರೊಡನೆ ಮಾತಾಡ ಬೇಕಾದರೆ ಮೊದಲೇ ತಾವು ಇಂಥ ವಿಷಯದ ಸಲುವಾಗಿ ಚರ್ಚೆ ಮಾಡುತ್ತೇವೆಂದು ಮುಂಗಡ ತಿಳಿಸಬೇಕಾಗುತ್ತದೆ. ಏಕೆಂದರೆ ಯಾರ್ಯಾ ರಿಗೆ ಯಾವದರಲ್ಲಿ ಚನ್ನಾಗಿ ಮಾಹಿತಿ ಇದೆಯೋ ಅವರ ಕಡೆ ಆ ವಿಷ ಯದ ಮಾಹಿತಿ ಅರಿತುಕೊಳ್ಳಲು ಅನುಕೂಲವಾಗುತ್ತದೆ. ಆದ್ದರಿಂದ ಮುಖಂಡರಾಗಲು ಮ. ಗಾಂಧಿಯವರು ಯೋಗ್ಯರಿದ್ದಾರೆ. ಮುಖಂಡರು ಬಹುಶ್ರುತರಾಗಿರುವದು ಅವಶ್ಯ ಪ್ರಚಾರಕರು ಸಹ ಬಹುಶೃತರಾಗಿರು ವದು ಅವಶ್ಯ ಯಾರ ಕಡೆಗೆ ಪ್ರಚಾರಕನು ಹೋಗುವನೋ ಅವರಿಗೆ ಸಲ್ಲುವಂತೆ ತನ್ನ ಯೋಗ್ಯತೆಯನ್ನು ಮೊದಲು ಬೆಳೆಯಿಸಿಕೊಂಡು ಇಡ ಬೇಕು. ನಮ್ಮ ಸಂಘವು ಹಿಂದುಳಿಯುವ ಕಾರಣವೇನೆಂದರೆ ನಮ್ಮಲ್ಲಿ ಯಾರೂ ಅಂಥಹ ಅಭ್ಯಾಸ ಮಾಡಿದವರಿಲ್ಲ. ರಾಜಕಾರಣದಂತೆ ಜನರಲ್ಲಿ

ನಮ್ಮ ಸಂಸ್ಥೆಯ ಪ್ರಚಾರವು ಸಾಕಷ್ಟು ಆಗಲು ಆಸ್ಪದವಿಲ್ಲ. ಈಗ ಕಾಂಗ್ರೆಸ್ಸಿನವರು ಮುಂಜಾವಿನಲ್ಲಿ ಊರ ಮೆರವಣಿಗೆ ಮಾಡುವದುರಿಂದ ಅದರಪ್ರಚಾರವು ಬೇಗನೆ ಆಗಿದೆ. ಇದೇ ನಾವು ಭಾವಬಿದಗೆಯ ಫಂಡಿಗೆ ವರ್ಷಕ್ಕೊಮ್ಮೆ ಹೊಂಟರೂ ಸಹ ಊರಿನಲ್ಲೆಲ್ಲಾ ತಿರುಗುವದರಿಂದ ಅದರಪ್ರಚಾರವು ಸಾಕಷ್ಟಾಗಿದೆ. ಈ ಪ್ರಕಾರ ಮಾಡುವದು ಒಂದು ಕಲೆ ಇರುತ್ತದೆ. ಕೆಲವರು ಪ್ರಚಾರ ಕಾರ್ಯದಲ್ಲಿ ನಿಪುಣರಿರುತ್ತಾರೆ. ಕೆಲವರಿಗೆ ಅದರ ಗಂಧವೇ ಇರುವದಿಲ್ಲ ಕೇವಲ ಕುಳಿತು ಕೆಲಸಮಾಡುವ ಸ್ವಭಾವವಿರುತ್ತದೆ. ತಮ್ಮ ತಮ್ಮ ಸ್ವಭಾವಗಳನ್ನು ಕಂಡು ಹಿಡಿದು ಪ್ರಚಾರಕರು ಕಾರ್ಯಕರ್ತರೊಬ್ಬರಿಗೊಬ್ಬರು ಸಹಾಯ ಮಾಡುತ್ತ ಹೋದಲ್ಲಿ ದೊಡ್ಡ ಕಾರ್ಯವಾಗುವದು. ಪ್ರಚಾರವಿಲ್ಲದೆ ಕಾರ್ಯಕ್ಕೆ ಬೆಂಬಲವಿಲ್ಲ. ಕಾರ್ಯವಿಲ್ಲದೆ ಪ್ರಚಾರಕ್ಕೆ ಸಾರ್ಥಕತೆಯಿಲ್ಲ. ಆದರೆ ಪ್ರಚಾರಕ್ಕೆ, ಹಣ, ಕತೃತ್ವಶಕ್ತಿ ಒಬ್ಬರಲ್ಲೇ ಸಾಕಷ್ಟು ಇರುವದು ಸಾಧ್ಯವಿಲ್ಲ. ಆದ್ದರಿಂದ ಪರಸ್ಪರರು ಪರಸ್ಪರರಿಗೆ ಪೂರಕವಾಗಿರುವದು ತೀರ ಅವಶ್ಯ.

೨೪–೧೨–೪೭:— ಪ್ರಚಾರಕರು ಕಾರ್ಯ ಮಾಡುವದರಲ್ಲಿ ಒಬ್ಬರಿಗೊಬ್ಬರು ನೆರವಾದಲ್ಲಿ ಆ ಕಾರ್ಯವು ಚೆನ್ನಾಗಿ ನಡೆಯುವದು. ಶ್ರೀ. ದಾ. ಇವರ ಪ್ರವೃತ್ತಿಯು ವಿಚಾರ ಪ್ರಚಾರ ಮಾಡುವದಿರಲಿಲ್ಲ. ಆದರೂ ಸಹ ತಮ್ಮ ಕಾರ್ಯಕ್ಕೆ ನೆರವಾಗುವಂಥವರಾರೂ ಸಿಗದ್ದರಿಂದ ತಾವೇ ಸ್ವತಃ ಪ್ರಚಾರಕಾರ್ಯಕ್ಕೆ ಹೊರಟರು. ಇವರು ಗು. ಹೋಗಿ ಇಲ್ಲಿಂದ ತೆಗೆದುಕೊಂಡು ಹೋದ ಪತ್ರದಿಂದ ಅಲ್ಲಿ ಇಳಿದುಕೊಳ್ಳಲು ಜಾಗ ಸಿಕ್ಕಿತು ಆ ಮನೆಯವರು ಶ್ರೀಮಂತರಿರುವದರಿಂದ ಅವರಿಗೆ ಈಕಾರ್ಯದ ಕಲ್ಪನೆಯೇ ಇರದ್ದರಿಂದ ಅವರಿಂದ ಇವರಿಗೆ ಯಾವ ಪ್ರಯೋಜನವೂ ಸಿಗದಾಯಿತು. ಇವರಿಗೆ ಊರು ಹೊಸದಿದ್ದುದರಿಂದ ಹಾಗೂ ಹೀಗೂ ಾವಡಿ ಎಲ್ಲಾದರೂ ಸುತ್ತಾಡಬೇಕೆಂದರೆ ಪರಿಚಯವಿಲ್ಲದವರಿಗೆ ಸಹಾಯ ಮಾಡುವರಾರೆಂಬ ಹೆದರಿಕೆ. ಮೇಲಾಗಿ ಅವರು ಇಳಿದುಕೊಂಡವರ ಮನೆಯವರ ಮುಖಾಂತರ ಕೆಲಸ ಮಾಡಿಸಬೇಕಾಗಿತ್ತು. ಇಲ್ಲವಾದರೆ ಎಲ್ಲಿ ಅವರು ಅವಮಾನವೆಂದು ತಿಳಿಯುವರೋ ಎಂಬ ಹೆದರಿಕೆ. ಎಲ್ಲ ತಿಳಿದುಕೊಂಡು

ಎರಡು ದಿನ ನಿಂತು ನಿರಾಶರಾಗಿ ಊರಿಗೆ ಬರಬೇಕಾಯಿತು. ನಂತರ ಇವರು ಮು. ದಲ್ಲಿ ತಮ್ಮ ಸ್ನೇಹಿತರಿರುವದರಿಂದಲೂ ಮತ್ತು ಅವರು ತಮ್ಮ ಮೊದಲಿನ ಸಂಸ್ಥೆಗೆಸಹಾಯ ಮಾಡಿದವರು ಇರುವದರಿಂದಲೂ ಅಲ್ಲಿಗೆ ಹೋದರೆ ಕಾರ್ಯವಾದೀತೆಂಬ ಕಲ್ಪನೆಯಿಂದ ಅಲ್ಲಿಗೆ ಹೋದರು. ಆದರೆ ಅಲ್ಲೂ ಸಹ ಇವರಿಗೆ ನಿರಾಶೆಯು ಚಿನ್ಹಗಳೇ ಕಾಣಹತ್ತಿದವು. ಮೊದಲು ಸ್ನೇಹಿತರೆಂದು ಮರ್‍ಯಾದೆ ಮಾಡುತ್ತಿದ್ದರೂ ಸಲಿಗೆಯಿಂದ ಮಾತುಕತೆಗಳಾಡಿ ನಲಿಯುತ್ತಿದ್ದವರೂ ಈಗ ಇವರನ್ನು ನೋಡಿದವರೆ ಮೋರೆ ತಿರುವ ಹತ್ತಿದರು. ಆದರೂ ಸಹ ಇವರು ಅವರನ್ನು ಸತ್ತೆಯಿಂದ ಹೀಗೇಕೆಂದು ಕೇಳಹತ್ತಿದರೆ ಅವರಿಂದ ತಿರಸ್ಕಾರದ ಉತ್ತರಗಳೇ ಬರಹತ್ತಿದವು. ಆದರೂ ಸಹ ಇವರು ಅದನ್ನು ಲಕ್ಷಿಸದೆ ತಮ್ಮ ಕಾರ್ಯವಾಗಬೇಕೆಂಬ ಹಂಬಲದಿಂದ ಅಲ್ಲೇ ತಮ್ಮ ಸ್ನೇಹಿತರ ಮನೆಯಲ್ಲಿ ವಸತಿಮಾಡಿ ಅವರನ್ನು ಹೀಗೇಕೆಂದು ಕೇಳಹತ್ತಿದರು.

೨೪-೧೨-೪೭:— ಅಲ್ಲಿ ಇವರಿಗೆ ಉಪಚಾರ ನಡೆದರೂ ಸಹ ಸ್ನೇಹಿತರೆಂಬಂತೆಯಾಗಲಿ ಕೆಲಸಗಾರರೆಂಬಂತೆಯಾಗಲೀ ಮರ್‍ಯಾದೆ ಸಿಗದ್ದರಿಂದ ಮನಸ್ಸಿಗೆ ಸಮಾಧಾನವಾಗಲಿಲ್ಲ. ಆಗ ಅವರು ತಮ್ಮ ಮೊದಲಿನ ಸಂಸ್ಥೆಯ ವಿಷಯವಾಗಿ ಎಷ್ಟೇ ತಿಳಿಸಿಹೇಳಿದರೂ ಸಹ ಅವರಿಗೆ ಅದರ ಮನವರಿಕೆ ಯಾಗದೆ ಆ ಸಂಸ್ಥೆಯನ್ನು ಮುರಿಯುವ ಉದ್ದೇಶದಿಂದಲೇ ಈ ಸಂಸ್ಥೆ ಸ್ಥಾಪಿಸಿರುವಿರೆಂದು ಇವರ ಮೇಲೆ ದೋಷ ಕೊಡಹತ್ತಿದರು. ಇದರಿಂದ ಇವರಿಗೆ ಅಲ್ಲಿ ತಮಗೇನೂ ಸಿಗಲಾರದೆಂದು ಮನಗಂಡು ಮೂರನೆ ದಿನವೇ ಇವರಿಗೆ ಆ ಊರು ಬಿಡಬೇಕಾಯಿತು. ಯಾರಿಗೇ ಆಗಲಿ ತಮ್ಮ ತಮ್ಮಲ್ಲಿ ಹತ್ತಿಹೊಂದಿದ ಸ್ನೇಹಿತರ ೨೪ ತಾಸೂ ಜೊತೆಗೂಡಿ ಆಡಿದವರ ಮನ ವನ್ನು ಸಹ ಸೂಕ್ಷ್ಮ ನಿರೀಕ್ಷಿಣಮಾಡಿ ತಿಳಿದುಕೊಳ್ಳುವ ವಿವೇಚನೆಯ ಮನಸ್ಸು ಇರುವದಿಲ್ಲ. ಹಾಗೆ ವಿಚಾರ ಮಾಡುವವರು ಕೇವಲ ಸ್ವಲ್ಪೇ ಜನರು ಹೊರಡುವವರು. ಮ. ಗಾಂಧಿಯವರು ಸರದಾರ ವಲ್ಲಭಭಾಯಿ ಪಟೇಲರ ಸಲುವಾಗಿ ಜನರಿಂದ ಎಷ್ಟೇ ಅಪವಾದಬಂದರು ಪುರಾವೆ ತೋರಿ ಸದಹೊರತು ತಾವು ಸರದಾರರ ಗುಣದೋಷಗಳನ್ನು ತಾವು ಬಲ್ಲರೆಂದು ಅದನ್ನು ನಂಬಲಾರೆವೆಂದು ಹೇಳಿ ಕಳುಹಿಸಿದರು.

ಈ ತೆರನಾಗಿ ಸೂಕ್ಷ್ಮರೀತಿಯಿಂದ ನಿಸ್ಪೃಹತೆಯಿಂದ ಸ್ನೇಹಿತರ ಅಭ್ಯಾಸಮಾಡುವದು ನಿಜವಾಗಿ ನೋಡಿದರೆ ಮಹಾತ್ಮರಂಥವರು ತಮ್ಮ ವೈರಿಗಳಲ್ಲಿ ಸಹ ಒಳ್ಳೇ ಗುಣಗಳಿದ್ದಲ್ಲಿ ಅದನ್ನು ಕಂಡುಹಿಡಿದು ಅವರ ಮೇಲೆ ಇಲ್ಲದ ಸಲ್ಲದ ಅಪವಾದಗಳು ತಮ್ಮ ಕಡೆಗೆ ಬಂದಾಗ ಅದನ್ನು ನಂಬುವದಿಲ್ಲ. ಇಂಥಪದರಲ್ಲಿ ತಮ್ಮೊಡನೇ ಇಡೀದಿನವಿದ್ದು ಅವರವರ ಮನವನ್ನು ತಿಳಿದುಕೊಂಡಿರುವ ವೇಳೆಯಲ್ಲಿ ಅದನ್ನು ಹೇಗೆ ಅಲ್ಲಗಳೆಯಲು ಸಾಧ್ಯ. ಆದರೆ ಸಾಮಾನ್ಯ ಜನರು ನಂಬಿದ್ದೇ ನಂಬುತ್ತಾರೆ. ಪ್ರಸಂಗ ಬಂದಾಗ ಮಿತ್ರದ್ರೋಹಕ್ಕೆ ಸಹ ಹಿಂಜರಿಯುವದಿಲ್ಲ. ಮುಂದೆ ಶೀ. ದಾ. ಇವರಿಗೆ ತಮ್ಮವರೇ ತಮಗಾಗದ್ದರಿಂದ ಇನ್ನು ಇವರ ಮುಂದೆ ತಮ್ಮ ಕಷ್ಟ ಸುಖ ಮತ್ತು ಉದ್ದೇಶವನ್ನು ಹೇಳಿಕೊಳ್ಳುವದರಿಂದ ಯಾವ ಪ್ರಯೋಜನವೂ ಆಗಲಾರದೆಂದು ಬಗೆದು, ತಾವು ಬೇರೆಯವರ ಕಡೆ ಯಿಂದಾದರೂ ಸಹಾಯ ಪಡೆಯಲು ಸಾಧ್ಯವಿರುವದೋ ಎಂಬ ಯೊಚನೆ ಯಿಂದ ತಮ್ಮ ಪರಿಚಯವಿಲ್ಲದ ಬೇರೆಯವರ ಕಡೆಗೆ ಗುರುತಿನ ಪತ್ರ ತೆಗೆದುಕೊಂಡುಹೊದರು. ರವಿಗೆ ಹೋದರು. ಆದರೆ ಇವರು ಇಳಿದು ಕೊಳ್ಳುವ ಮನೆಯವರು ಮೊದಲಿನ ಸಂಸ್ಥೆಯ ಚಾಲಕರ ಮಾವಂದಿರಿ ದ್ದುದರಿಂದ ಅವರು ತಮ್ಮನ್ನು ಹಚ್ಚಿಕೊಳ್ಳಲಿಕ್ಕಿಲ್ಲವೆಂದು ತಿಳಿದು ಬೇರೆ ಯವರ ಮನೆಯಲ್ಲಿ ಇಳಿಯಬೇಕೆಂದು ಅಲ್ಲಿ ಹೋಗಿ ಕೇಳಿದರೂ ಯಾರೂ ಹಚ್ಚಿಕೊಳ್ಳದ್ದರಿಂದ ತಿರುಗಿ ಅವರಲ್ಲಿಗೇ ಬಂದು ಅವರನ್ನು ಬೇಡಿಕೊಳ್ಳಲು ಅವರಾದರೂ ಅದಕ್ಕೆ ಒಪ್ಪಿಗೆಯನಿತ್ತರು. ಅಲ್ಲಿಯವರೂ ಅವರ ಮುಖಾಂತರ ವಾಗಿಯೇ ಕೆಲಸ ಮಾಡಬೇಕೆಂದು ಸ್ವಸ್ಥ ಕುಳಿತದ್ದನ್ನು ನೋಡಿ ಒಳ್ಳೇ ಘಟಕಾಪ ಆ ಮನೆಯ ಯಜಮಾನರ ತಾಯಿಯವರು ಶೀ. ದಾ. ಇವರಿಗೆ ಸಿಟ್ಟುಮಾಡಿ ಹೀಗೆ ಮಾಡಿಕೊಂಡರೆ ಪ್ರಚಾರದ ಕೆಲಸವಾದೀತೆಂದು ಪಾಠ ಕಲಿಸಿದರು. ಅಂದಿನಿಂದ ತಮ್ಮ ಕೈಲಾದಷ್ಟು ತಮ್ಮ ಕೆಲಸವನ್ನು ತಾವೇ ಮಾಡಬೇಕು, ಯಾರ ಸಹಾಯ ಎಷ್ಟು ಸಿಗುವದೋ ಅಷ್ಟೇ ತೆಗೆದುಕೊಂಡು ಕಾರ್ಯದ ಶ್ರೇಯಸ್ಸೆಲ್ಲ ಯಾರ ಸಹಾಯ ತೆಗೆದು ಕೊಳ್ಳಲು ನಾವು ಆ ಊರಿಗೆ ಹೋಗಿರುತ್ತೇವೆ ಅವರಿಗೆ ಸಲ್ಲಬೇಕು. ಅಂದರೆ "ಪರಗುಣ ಪರಮಾಣಾನ್ ಪರ್ವತೀಕೃತ್ಯ ನಿತ್ಯಂ" ಎಂಬ

ತತ್ವದಂತೆ ನಡೆದರೆ ಲಾಭವಾಗುವದು, ಹೀಗೆ ಮಾಡದೆ ತಾವಿಳಿದ ಮನೆಯುವರು ತಮಗೇನೂ ಸಹಾಯು ಮಾಡಲಿಲ್ಲ ತಮ್ಮ ಕೆಲಸ ತಾವೇ ಮಾಡಿಕೊಂಡರೆಂದು ಅಪಪ್ರಚಾರ ಮಾಡುವದರಿಂದ ಆ ಯಜಮಾನರು ಕಾರ್ಯಕ್ಕೆ ವಿಘ್ನ ಬರುವರು. ಮತ್ತು ಮುಂದಿನ ಸಲ ಇಳಿಸಿಕೊಳ್ಳುವದಿಲ್ಲ. ಸಾಮಾನ್ಯ ಜನರು ಕೀರ್ತಿಲೋಲುಪರಿರುವರು, ಒಂದು ವೇಳೆ ಕೀರ್ತಿ ಸಿಗದಿದ್ದರೂ ಅಡ್ಡಿಯಿಲ್ಲ. ಅಪಕೀರ್ತಿ ಸಹಿಸಲಾರರು. ಕಾರಣ ಕೆಲಸಗಾರರು ಶಕ್ಯವಿದ್ದಷ್ಟು ಇತರರ ಸದ್ಗುಣಗಳನ್ನು ಕಂಡು ಹಿಡಿದು ಹೊಗಳುವದಾದರೆ ಹೊಗಳಬೇಕೇ ಹೊರತು, ದೋಷಗಳನ್ನು ಬೈಲಿಗಿಡಲು ಅವರಿಗೆ ಅಧಿಕಾರವಿಲ್ಲ. ಹೀಗೆ ಮಾಡುವವರು ಕೆಲಸಗಾರರಲ್ಲ, ಮತ್ತು ಅವರ ಕಡೆಯಿಂದ ವಿಧಾಯಕ ಕೆಲಸಗಳೇ ಆಗುವದಿಲ್ಲ.

೨೫-೧೨-೪೭:— ಪ್ರತಿಯೊಬ್ಬರ ಒಲವಿನಂತೆ ಕೆಲಸಗಳಾದರೆ ಅಥವಾ ಕೈಕೊಂಡರೆ ಆ ಕೆಲಸಗಳು ಸರಿಯಾಗಿ ಆಗುತ್ತವೆ. ಇದೇ ತೆರನಾಗಿ ಯಾವದೇ ಕಾರ್ಯಪ್ರಚಾರ ಮಾಡಬೇಕಾದರೆ ಪ್ರಚಾರಕರಲ್ಲಿ ಕೆಲವು ಹುಟ್ಟು ಗುಣಗಳಿರಬೇಕಾಗುತ್ತದೆ. ಸಾಹಸ, ಧೈರ್ಯ, ಮಾತುಗಾರಿಕೆ, ಚುರುಕುತನ, ಪ್ರಸಂಗಾವಧಾನ, ಎರಡನೆಯವರಿಗೆ ಕೂಡಲೇ ಉಪಯೋಗ ಬೀಳುವಂಥ ಪ್ರವೃತ್ತಿ, ಆರೋಗ್ಯ, ವ್ಯವಹಾರ ಚಾತುರ್ಯ ಮತ್ತು ಸಮಯೋಜಿತ ಉತ್ತರ ಕೊಡುವ ತತ್ಪರತೆ, ನಿರಾಲ್ಯತನ ಹಾಗೂ ಜಾಗರೂಕತೆ ಇವೇ ಮೊದಲಾದ ಗುಣಗಳು ಪ್ರಚಾರಕರಲ್ಲಿದ್ದಷ್ಟು ಕಾರ್ಯಕ್ಕೆ ಅನುಕೂಲ ಮತ್ತು ಕೆಲವರು ಸಣ್ಣ ಕಲಸಗಳನ ಮಾಡಲು ಬೇಕಾಗುವ ಅಚ್ಚುಕಟ್ಟುತನ, ಕೀರ್ತಿ ವಿಮುಖತೆ, ಶಾಂತ ಹಾಗೂ ತಾಳ್ಮೆ ಸ್ವಭಾವದವರಿರುತ್ತಾರೆ. ಇಂಥವರು ವಿಧಾಯಕ ಕೆಲಸಗಳನ್ನು ಸರಿಯಾಗಿ ಮಾಡಬಲ್ಲರು. ಇಂಥ ಸ್ವಭಾವದವರು ಪ್ರಚಾರ ಕೆಲಸ ಮಾಡಹೋದರೆ ಅದು ಸರಿಯಾಗಿ ಆಗಲಾರದು. ಆದರೆ ಯಾವದಾದರೊಂದು ಕಾರ್ಯವಾಗಬೇಕಾದರೆ ಈ ಎರಡೂ ತರದ ಸ್ವಭಾವವುಳ್ಳವರ ಸಹಕಾರವು ಅಗತ್ಯವಿದೆ. ತಕ್ಕಮಟ್ಟಿಗೆ ಯಾವದೇ ಕಾರ್ಯ ಮಾಡಬೇಕಾದರೂ ಈ ಎರಡೂ ಸ್ವಭಾವಗಳು ಪ್ರತಿಯೊಬ್ಬ ಕಾರ್ಯಕರ್ತನಲ್ಲಿ ಹೆಚ್ಚು

ಕಡಿಮೆ ಪ್ರಮಾಣದಿಂದ ಇರುವದು ಆಗತ್ಯವಿದೆ. ಸ್ವಲ್ಪ ಅಭ್ಯಾಸದಿಂದಾದರೂ ಆ ಗುಣಗಳನ್ನು ಗಳಿಸುವದು ಆಗತ್ಯವಿದೆ. ಧ್ಯೇಯದ ಲವಲವಿಕೆಯಿದ್ದಲ್ಲಿ ಆ ಗುಣಗಳನ್ನು ಗಳಿಸುವದು ಸಾಧ್ಯವಿದೆ.

ಈ ತೆರನಾದ ಪ್ರಚಾರ ತತ್ವದ ಗುಣಗಳು ನಮ್ಮ ತಮ್ಮಂದಿರಾದ ಶ್ರೀ. ಸ. ಇವರಲ್ಲಿ ಇರುವದರಿಂದ, ಆವರು ರಾಜಕಾರಣದಲ್ಲಿ ಧುಮುಕಿ ಲೋಕಪ್ರಿಯರಾಗಿದ್ದರು. ಅವರ ಆ ಲೋಕಪ್ರಿಯತೆಯ ಹಾಗು ಪರಿಚಯದ ಲಾಭವನ್ನು ಪಡೆಯಬೇಕೆಂದು ಅವರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಲಾಯಿತು. ಆದರೆ ಅವರದು ಅಪೇಕ್ಷೆಯಂತೆ ಉಪಯೋಗವಾಗಲಿಲ್ಲ. ಏಕೆಂದರೆ ರಾಜಕಾರಣದ ಪ್ರಚಾರವು ಮೊದಲೇ ಸಾಕಷ್ಟು ಆಗಿದ್ದರಿಂದ ಅದರಲ್ಲಿ ನೆರವು ಕೊಟ್ಟವರು ಈ ಸಾಮಾಜಿಕ ವಿಷಯವಾದ ಸ್ತ್ರೀಯರ ಉನ್ನತಿಯ ಕೆಲಸದ ಪೂರ್ವಪ್ರಚಾರದ ಅಭಾವದ ಮೂಲಕ ಈ ವಿಷಯಕವಾಗಿ ಸಾಮಾನ್ಯವಾಗಿದ್ದ ತಿರಸ್ಕಾರ, ಉದಾಸೀನತೆ ಮುಂತಾದವುಗಳ ಮೂಲಕ ನೆರವಾಗಲಿಲ್ಲ. ಆದ್ದರಿಂದ ಒಂದು ಕೆಲಸದಲ್ಲಿ ನೆರವು ಕೊಟ್ಟವರೂ ಬೇಕಾದರಲ್ಲಿ ಸಹಾಯ ಮಾಡಬಹುದೆಂಬ ನಂಬಿಗೆಯು ಹಾರಿಹೋಯಿತು. ಆದರೂ ಯಾವದೇ ಕಾರ್ಯಮಾಡುವದರಲ್ಲಿ ಬಂದ ಅನುಭವದಿಂದ ಜ್ಞಾನದ ಅಥವಾ ಗಳಿಸಿದ ಸ್ವಭಾವಗಳ ಉಪಯೋಗವು ಎಲ್ಲ ಕಾರ್ಯಗಳಲ್ಲಿ ಸ್ವಲ್ಪ ವ್ಯತ್ಯಾಸದಿಂದ ಹೆಚ್ಚು ಕಡಿಮೆ ಪ್ರಮಾಣದಿಂದ ಆಗಿಯೇ ತೀರುವದು.

೨೬-೧೨-೪೭:-- ಬ. ಗೆ ವರ್ಗಣಿಗೆ ಹೋದಾಗ ಹೊ. ಗೆ ಹೋಗಬೇಕೆಂದು ಮಾಡಿ ಇವರ ತಮ್ಮಂದಿರ ಕಡೆಯಿಂದ ಪತ್ರ ತೆಗೆದುಕೊಂಡು ಹೋಗಬೇಕೆಂದು ಆವರನ್ನು ಕೇಳಲು, ಅವರು ಸ್ವತಃ ತಾವೇ ಬಂದರು. ಅಲ್ಲಿ ಹೋಗಿ ಒಬ್ಬ ವಕೀಲರ ಮನೆಯಲ್ಲಿ ಇಳಿದುಕೊಂಡರು. ಇವರ ತಮ್ಮಂದಿರ ಕಲ್ಪನೆಯು ಅವರು ತಮ್ಮನ್ನು ಹಚ್ಚಿಕೊಳ್ಳುವರೆಂದಿತ್ತು. ಆದರೆ ಅವರು ಯಾವ ರೀತಿಯಿಂದಲೂ ಹಚ್ಚಿಕೊಳ್ಳಲಿಲ್ಲ. ಇವರು ಅಲ್ಲಿಗೆ ಹೋದ ದಿನ ಏಕಾದಶಿ ಇದ್ದುದರಿಂದ ಇವರು ತಮಗೆ ತಿನ್ನಲು ಕೇಳುವದೂ ಸಹ ಆಗದ ಮಾತಾದ್ದರಿಂದ ಅಂದು ಹಾಗೇ

ಹಂ ನೋಡಲು ಹೋದೆವು. ತಿರುಗಿ ಸಂಜೆಗೆ ಮನೆಗೆ ಬಂದಾಗ ಸಹ ಮನೆಯವರು ಸರಿಯಾಗಿ ಮಾತಾಡಲಿಲ್ಲ. ಮನೆಯವರ ಪರಿಚಯ ಸರಿಯಾಗಿರದ್ದರಿಂದ ಅವರನ್ನು ಏನು ಕೇಳಬೇಕು ಏನು ಹೇಳಬೇಕೆನ್ನು ವದು ತಿಳಿಯದೆ ಸುಮ್ಮನಿರಬೇಕಾಯಿತು. ಮಾರನೇ ದಿನ ದ್ವಾದಶಿ ಬೇರೆ ಇದ್ದುದರಿಂದ ಆ ಮನೆಯವರು ಆಚಾರ್ಯರಿದ್ದುದರಿಂದ ಬೆಳಗು ಮುಂಜಾವಿನಲ್ಲೇ ದೇವರ ಪೂಜೆ ಪುನಸ್ಕಾರಗಳು ನಡೆಯಹತ್ತಿದವು. ಕೊನೆಗೆ ಊಟದ ವೇಳೆಯಲ್ಲಿ ಮನೆಯ ಹೆಂಗಸರು ಏನು ನಿನ್ನೆ ಬಂದವರು ಊಟ ಮಾಡುತ್ತಾರೋ ಇಲ್ಲವೋ ಎಂದು ಬೆದರಿಸಿಕೇಳಲು ಯಾರೋ ಒಬ್ಬರು ಬಂದು ಇವರನ್ನು ಕೇಳಲು ಊಟಕ್ಕೇಳುತ್ತೇವೆಂದು ನಾಚಿಕೆ ಬಿಟ್ಟು ಹೇಳಬೇಕಾಯಿತು. ಆ ಮನೆಯವರು ನಮಗೆ ಪಾಯಖಾನೆ ಸಹ ತೋರಿಸಲಿಲ್ಲ. ಹಾಗೂ ಹೀಗೂ ಮಾಡಿ ಇವರ ತಾಯಿಯವರು ಒಳಗೆ ಹೋದರು. ಆದರೆ ನಾವಿಬ್ಬರು ಅಲ್ಲೇ ಕುಳಿತುಕೊಳ್ಳುವ ಪ್ರಸಂಗ ಬಂದಿತು, ಕಾರ್ಯ ಮಾಡಬೇಕೆಂಬ ಒಂದೇ ಹಂಬಲವಿದ್ದವರಿಗೆ ತಮ್ಮ ಕಾರ್ಯದಲ್ಲ ಇಂಥ ಎಷ್ಟೋ ತೊಡಕುಗಳು ಬಂದಾಗ್ಯೂ ಸಹ ಅವುಗಳನ್ನು ಎದುರಿಸಬೇಕಾಗುತ್ತದೆ. ಶ್ರೀ ದಾ. ಇವರು ಸ್ವಭಾವತಃ ನಾಚುಬುರುಕ ರಾದರೂ ಸಹ ಹೀಗೆ ರಸ್ತೆಯಲ್ಲಿ ಹೊರಗಡೆ ಹೋಗುವದೆಂದರೆ ಅವರ ಜನ್ಮದಲ್ಲೇ ಗೊತ್ತಿರದ ಮಾತಾಗಿದ್ದರೂ ಸಹ, ಈಗ ತಮ್ಮ ಕಾರ್ಯವು ಹೇಗಾದರೂ ಸಾಗಬೇಕಾದ ಪ್ರಸಂಗ ವಿದ್ದುದರಿಂದ ಎಲ್ಲ ಪರಿಸ್ಥಿತಿಯನ್ನು ಎದುರಿಸಿ ಹೋಗಬೇಕಾಯಿತು. ಹಾಗೂ ಹೀಗೂ ಮಾಡಿ ಅಲ್ಲಿ ಅಂದಿನ ಊಟದ ಶಾಸ್ತ್ರವನ್ನು ತೀರಿಸಿಕೊಂಡರು. ಈ ತೆರನಾಗಿ ಅತಿಥಿಗಳಿಗೆ ತೊಂದರೆ ಆಗಬಾರದು. ಅವರು ಯಾವದಕ್ಕೂ ಸಂಕೋಚ ಪಡಬಾರ ದೆಂದು ಮನೆಯನ್ನೆಲ್ಲ ತೋರಿಸುವ ಹಾಗು ಅವರಿಗೆ ತಮ್ಮ ಮನೆತನದ ರೂಢಿ ನಡತೆಗಳನ್ನು ಹೇಳಿ ಅವರ ರೀತಿ ನಡತೆಗಳನ್ನು ತಿಳಿದುಕೊಂಡು ಅವರವರ ಸ್ವಭಾವಕ್ಕನುಗುಣವಾಗಿ ಉಪಚರಿಸುವದಗತ್ಯ. ಆ ಆಚಾ ರ್ಯರು ಸ್ವಭಾವತಃ ಹುಂಬರೇನೋ ಸರಿ. ಆದರೂ ಅವರಿಗೆ ರಾಜಕಾರಣ ದಲ್ಲಿದ್ದಷ್ಟು ಈ ಹೆಣ್ಣುಮಕ್ಕಳ ವಿಷಯದಲ್ಲಿ ಸೇರಿಕೆಯಿದಿಲ್ಲ. ಬಹುತೇಕ ರಾಜ್ಯಕಾರಣಿಗೆ ಸಲ್ಲದಂತೆ ಅಲ್ಲದಂತೆ ಅಜ್ಞಾನವು ಅವರಲ್ಲಿ ತುಂಬಿಹೋಗಿತ್ತು

ಆದ್ದರಿಂದ ಅವರು ಹೀಗೆ ಅಲಕ್ಷ್ಯಮಾಡಿದ್ದು, ಆದರೆ ಸ್ವಭಾವವೇನೋ ಉದಾರ ಉತ್ತಮ. ಆದರೆ ಅವರ ಹೆಂಡತಿಯು ಶ್ರೀಮಂತಿಕೆಯ ಜಂಬ ಅಜ್ಞಾನದಿಂದ ತುಂಬಿದ್ದಳು. ಇದೊಂದು ರಾಜಕಾರಣದಷ್ಟು ಸಾಮಾಜಿಕ ವಿಷಯದ ಪ್ರಚಾರಾಗಿಲ್ಲೆಂಬುವಕ್ಕೆ ಸಾಕ್ಷಿ.

೨೭-೧೨-೪೭:— ಕಾರ್ಯ ಯಾವದೇ ಇದ್ದರೂ ಸಹ ಆದರಲ್ಲಿ ಅಪಯಶಸ್ಸು ಬಂದರೂ ಮುಂದಿನವರಿಗೆ ಅದು ಮಾರ್ಗದರ್ಶಕವಾಗುತ್ತದೆ. ಇವರಂತೆ ಮೊದಲು ಕಾರ್ಯ ಮಾಡಿದವರ ಕಿಮ್ಮತ್ತು ಕಡಿಮೆಯೆಂದಲ್ಲ. ಕೆಲವು ಕೆಲಸಗಳ ಪ್ರಚಾರ ಬೇಗನೆ ಆಗುವದು. ಕೆಲವು ಮೊಳಕೆಯಲ್ಲಿಯೇ ಮುರಿದು ಕಮರ ಹತ್ತುವವು, ಹೀಗಾಗಲು ಕಾರಣವೇನೆಂದರೆ ಜನರ ತಾತ್ಪೂರ್ತಿಕ ಉಪಯೋಗಕ್ಕೆ ಯಾವದು ಅವಶ್ಯವಿರುವದೋ ಅದು ಮಾತ್ರ ಬೇಗನೆ ಮುಂದೆ ಬರಲು ಕಾರಣವಾಗುತ್ತದೆ. ಕಿರ್ಲೋಸ್ಕರ ವಾಡಿಯು ಮುಂದೆಬರಲು ಕಾರಣವೇನೆಂದರೆ ಅದರದು ಜನರಿಗೆ ಉಪಯೋಗವು ಜಾಸ್ತಿಯಾದದ್ದು. ಆದರೆ ಇದೇ ಕರ್ನಾಟಕದಲ್ಲಿ ಸ್ಥಾಪಿಸಿದ ಸಂಸ್ಥೆಯು ಮುಂದೆ ಬರಲುಎಷ್ಟೋ ವರ್ಷಗಳು ಬೇಕಾದವು. ಇದು ಜನರಿಗೆ ಅತ್ಯಗತ್ಯ ವಿಷಯವಾದರೂ ಸಹ ಜನರು ಅದರಕಡೆಗೆ ದುರ್ಲಕ್ಷ ಮಾಡುತ್ತಲಿದ್ದಾರೆ. ತಪ್ಪಿಗಾಗಿ ಶಿಕ್ಷೆಕೊಡಬಾರದೆಂದು ಹೊರಟ ಸಂಸ್ಥೆ ಬದುಕುವದು ಕಷ್ಟ. ಅದರಲ್ಲೂ ಎಷ್ಟೋ ಸಂಸ್ಥೆಗಳು ಒಮ್ಮೆ ತಪ್ಪು ಮಾಡಿದ ಹೆಣ್ಣುಮಕ್ಕಳನ್ನು ಕರೆದುಕೊಳ್ಳುವವೇ ವಿನಃ ಎರಡನೇ ಸಾರೆ ತಪ್ಪಿದಕೆಂದರೆ ಅವರನ್ನು ಕರೆದುಕೊಳ್ಳಲು ಹಿಂಜರಿಯುವರು. ಹೀಗೆ ಕರೆದುಕೊಳ್ಳುವ ಸಂಸ್ಥೆಯು ಹಿಂದುಸ್ಥಾನದಲ್ಲಿ ಒಂದಾದರೂ ಇದೆಯೋ ಇಲ್ಲವೋ ಎನ್ನುವದೇ ಸಂಶಯವಾಗಿದೆ. ಆದ್ದರಿಂದ ತೀ. ದಾ. ಇವರಿಗೆ ಈ ಹೆಣ್ಣುಮಕ್ಕಳ ಮೇಲೆ ಆಗುತ್ತಿರುವ ಅನ್ಯಾಯವನ್ನು ದೂರಮಾಡುವದಿತ್ತು. ಆದ್ದರಿಂದ ಅವರು ತಮಗೆ ಎದುರಾಗಿಬಂದ ಎಲ್ಲ ಕಷ್ಟನಷ್ಟಗಳಿಗೆ ತಲೆಕೊಡಬೇಕಾಗಿತ್ತು. ಅಂದು ಇವರ ತಾಯಿ. ತಮ್ಮಂದಿರು ಹೊ. ಯ ಸುಖವು ಸಾಕೆಂದು ಊರಿಗೆ ಹಿಂದಿರುಗಿದರು. ಆದರೆ ದನ ಕಾಯುವವರಿಗೆ ದನದ ಕಾಳಜಿ ಇಲ್ಲದಿದ್ದರೂ ಅದನ್ನು ಕಟ್ಟಿದವನಿಗೆ ಅದು ಬಿಡಲಾರದ ಮಾತಾದ್ದರಿಂದ

ಅವರು ಹೋದರೆಂದು ತೀ. ದಾ. ಇವರು ಹೇಗೆ ಊರಿಗೆ ಹಿಂತಿರುಗ
ಬಹುದೀತು? ಮೇಲಾಗಿ ಯಾವದಾದರೊಂದು ಲಾಭ ಸಿಗುವಂತಿದ್ದರೆ ಅದು
ದುಡ್ಡಾಗಲೀ, ಕೀರ್ತಿಯಾಗಲೀ, ಸಿಗುವಂತಿದ್ದರೆ ಕೆಲಸ ಮಾಡಲು ಒಬ್ಬರ
ಲ್ಲೊಬ್ಬರು ಸಿಗಬಹುದು. ಮಿಕ್ಕದ್ದಾವದು ಸಿಗದಿದ್ದರೂ ಉಚ್ಚ
ಧ್ಯೇಯದಿಂದ ಸತತ ಪ್ರಯತ್ನ ಮಾಡಿದಲ್ಲಿ ಸತ್ತಮೇಲಾದರೂ ಕೀರ್ತಿ ಸಿಗು
ವದು ಖಂಡಿತ; ಕೀರ್ತಿ ಹೆಚ್ಚು ಸಿಗುವದೆಂದರೆ ಕಾರ್ಯದ ಪ್ರಚಾರ
ವಾಗುವದು. ಪ್ರಚಾರವಾದಂತೆ ಮಿಕ್ಕ ರೊಕ್ಕ, ಸೌಕರ್ಯಗಳು ಸಿಗುವದು
ಸ್ವಾಭಾವಿಕ. ಆದರೆ ಈ ಕೀರ್ತಿಯನ್ನು ಗುರಿಯಾಗಿಟ್ಟುಕೊಂಡು ಕೆಲಸ ಮಾಡಿ
ದಲ್ಲಿ ಅಥವಾ ಅದರ ಮೋಹಕ್ಕೆ ಬಲಿಬಿದ್ದಲ್ಲಿ ಕಾರ್ಯ ನಾಶವಾಗುವದು
ಖಂಡಿತ. ಇದನ್ನರಿತು ಕೇವಲ ಕಾರ್ಯಕ್ಕೇನೇ ಕಾರ್ಯವೆಂದು ತಿಳಿದು
ಕಾರ್ಯಮಾಡುವವರು ತೀರ ಸ್ವಲ್ಪ ಜನರು. ಈ ಕೀರ್ತಿ ಅಪಕೀರ್ತಿಗಳೆರಡೂ
ಕ್ಷಣಭಂಗುರ, ಇದನ್ನರಿಯದೆ ಇದ್ದ ಅಜ್ಞಾನಿ ಹೆಣ್ಣುಮಕ್ಕಳು ತಾವು
ಮೇಲಕ್ಕೆ ಬಂದು ಕೀರ್ತಿವಂತರಾದ ಕೂಡಲೇ ತಮ್ಮ ಹಿಂದಿನ ಸ್ಥಿತಿಗತಿ
ಗಳನ್ನು ಮರೆತು ಮಿಕ್ಕ ಪತಿತ ಭಗಿನಿಯರ ಕೂಡ ಇಷ್ಟೇ ಅಲ್ಲ ತಮ್ಮ
ಉದ್ಧಾರಕರ್ತರ ಕೂಡ ಗಳಿಸಿದ ಕೀರ್ತಿ ಅಳಿದು ನಷ್ಟವಾದೀತೆಂಬ ಭಯ
ದಿಂದ ಸಹಕಾರ ಮಾಡುವದಿಲ್ಲ. ಇಷ್ಟೇ ಅಲ್ಲ ಕಾರ್ಯ ನಾಶ ಸಹ ಮಾಡ
ಲುದ್ಯುಕ್ತರಾಗುವರು. ಇಷ್ಟು ಈ ಹೆಣ್ಣುಮಕ್ಕಳ ಕಾರ್ಯವು ತೊಡಕಿನ
ದಿರುವಷ್ಟು ಇಡೀ ಜಗತ್ತಿನಲ್ಲಿ ಭಾರತದಲ್ಲಿ ಮತ್ತಿಷ್ಟು ಕರ್ನಾಟಕದಲ್ಲಿ
ಮತ್ತಾವಕಾರ್ಯ ಇರುವದಿಲ್ಲ.

೨೮-೧೨-೪೭:— ಯಾರನ್ನು ಕೇಳಿದರೂ ಸಹ ತೀ. ದಾ. ಇವರ
ಸಂಘಟನಾಸಮಿತಿಯ ಸಭೆಗಳ ಏರ್ಪಾಟು ಸರಿಯಾಗಿಲ್ಲ ಅಪ್ರಯೋಜನ
ಕಾರಿ— ಅನ್ನುತ್ತಾರೆ. ಯಾವಾಗಲೂ ಮನುಷ್ಯನು ತನಗೆ ಅಗತ್ಯವಿ
ದ್ದಾಗ ಉಪ್ಪು, ಭಕ್ಕರಿಯಲ್ಲಿ ತೃಪ್ತನಾಗುತ್ತಾನೆ. ಇಲ್ಲದಿದ್ದರೆ ಪಂಚ
ಭಕ್ಷಪರಮಾನ್ನಗಳು ಸಿಕ್ಕರೂ ಸಹ ಮೂಗು ಮುರಿಯುತ್ತಾನೆ. ಅದರಂತೆ
ತೀ. ದಾ. ಇವರಿಗೆ ತಮ್ಮ ಕೆಲಸವಾಗುವ ಅಗತ್ಯವೊಂದೇ ಹೆಚ್ಚಾಗಿದ್ದು
ದರಿಂದ ಇಳಿದುಕೊಂಡವರ ಮನೆಯಲ್ಲಾಗುವ ತಾಪಗಳಿಗೆ ಬೆಲೆಕೊಡದೆ
ಕಾರ್ಯ ನಿರ್ವಾಹಕ್ಕಾಗಿ ಎದೆಗೊಟ್ಟು ನಿಂತರು. ಮುಂದೆ ವಕೀಲರು

ಮುಂದೆ ವಕೀಲರು ಊರಿಗೆ ಹೊರಟುಹೋಗಿದ್ದರಿಂದ ಇನ್ನು ಅವರ ಸಹಾಯುವಂತೂ ತಮಗೆ ಒಳ್ಳುವ ಆಸೆಯಿಲ್ಲವೆಂದು ತಿಳಿದು ತಾವೇ ಅಲ್ಲಿ ಇಲ್ಲಿ ತಿರುಗಾಡಿ ೧೦-೧೨ ರೂ. ಕಲೆಹಾಕಿ ಆ ಊರನ್ನು ಬಿಟ್ಟು ಬಂದನಂತರ ತವಕ್ಕೃ ತಮ್ಮಂದಿರೊಡಗೂಡಿ ಬೇರೆಬೇರೆ ಊರುಗಳನ್ನು ಸುತ್ತಿದರು. ಮೊದಲು ಇವರ ತಮ್ಮಂದಿರ ಪ್ರಾಣಕ್ಕೆ ಪ್ರಾಣಕೊಡುವಂತಿದ್ದ ರಾಜಕಾರಣವಲ್ಲಿಯು ಗೆಳೆಯರು ಈಗ ಇವರು ಸಾಮಾಜಿಕ ಕೆಲಸಕ್ಕೆ ಹೋದೊಡನೆ ಹಿಂಜರಿಯ ಹತ್ತಿದರು. ಕೊನೆಗೆ ಇವರು ಬ್ಯಾ...ಗಿಗೆ ಬಂದರು. ಅಲ್ಲಿ ಯಾರ ಮನೆಯಲ್ಲಿ ಇಳಿದುಕೊಳ್ಳಬೇಕೆನ್ನುವ ಸಲುವಾಗಿ ಪತ್ರ ಬರೆದಿದ್ದರು. ಅವರು ಭೆಟ್ಟಿಯಾಗಲಿಲ್ಲ. ಅವರು ಇವರಿಗೆ ಒಂದು ಗುಡಿಯಲ್ಲಿ ಇರಲು ಹೇಳಿದರು. ಮಾರನೇ ದಿನ ಆ ಊರಿನ ಎಷ್ಟೋ ಜನರು (ಗುಡಿಗೆ ಬಂದವರು) ಬಂದು ಇವರನ್ನು ನೋಡಿ ಮಾತನಾಡಿಸಿ ಹೋಗ ಹತ್ತಿದರು. ಎಲ್ಲರೂ ಸಹಾನುಭೂತಿಯಿಂದ ಮಾತಾಡುವವರೇ ಹೊರ ತಾಗಿ ಸಹಾಯ ಮಾಡುವವರಿರಲಿಲ್ಲ. ಆದರೆ ಕೆಲವು ವ್ಯಾಪಾರಸ್ಥರು ಒಂದು ಇರುವ ಊಟದ ವ್ಯವಸ್ಥೆಮಾಡಿದರು. ವ್ಯಾಖ್ಯಾನದ ವ್ಯವಸ್ಥೆ ಮಾತ್ರ ಆಗಲಿಲ್ಲ. ಪ್ರತ್ಯಕ್ಷ ಹೆಣ್ಣುಮಕ್ಕಳ ಸಲುವಾಗಿ ಕೈಕೊಂಡ ಕಾರ್ಯದಲ್ಲಿ ಜನರು ನೆರವಾಗಲು ಸಿದ್ಧರಿರಲಿಲ್ಲ. ಒಬ್ಬ ಸೂಳೆಯು ಹಾದಿಯ ಮೇಲಿದ್ದರೆ ಅವಳಿಗಾಗಿ ದೇಕಾದ್ದನ್ನು ಕೊಡಲು ಜನರು ಹಿಂಜರಿಯುವದಿಲ್ಲ. ಹೆಣ್ಣುಮಕ್ಕಳ ಸ್ವಾತಂತ್ರ್ಯದ ಸಲುವಾಗಿ ಯಾವ ಉಪಾಯ ಮಾಡಬೇಕು? ಎಂಬ ವಿಷಯದ ನಿರ್ಣಯ ಮಾಡುವದನ್ನು ಬಿಟ್ಟು ಅವರನ್ನು ಘೋಷಾಪದ್ಧತಿಯಲ್ಲಿಟ್ಟರೆ ಅವರ ಪಾವಿತ್ರ್ಯ ಉಳಿಯು ವದೆಂಬ ಹುಚ್ಚು ಕಲ್ಪನೆಯು ಜನರಿಗೆ ಮನವರಿಕೆಯಾಗಿ ಅವರು ಅದೇ ರೂಢಿಯನ್ನಿಟ್ಟಿದ್ದಾರೆ. ಆದರೆ ಇದರಿಂದ ಹೆಣ್ಣುಮಕ್ಕಳ ಮನಸ್ಸು ಗಂಡ ಸರಸಲುವಾಗಿ ಕಲುಷಿತವಾಗುವದೆನ್ನುವದು ಶತಸಿದ್ಧಾಂತ. ಈಗ ನೂರಾರು ವರ್ಷಗಳ ಹಿಂದೆಯೇ ಒಬ್ಬ ಗ್ರಂಥಕಾರನು "ಇಂದಲ್ಲ ನಾಳೆಯಾದರೂ ಹೆಣ್ಣುಮಕ್ಕಳು ಬಂಡು ಮಾಡದೇ ಇರಲಾರರು" ಎಂದು ಹೇಳಿದ್ದಾನೆ. ಬೆಂಕಿಯನ್ನು ಕಾಪಾಡುವೆನೆಂದು ಅದನ್ನು ಕಂಬಳಿಯಲ್ಲಿ ಸುತ್ತಿಟ್ಟರೆ ಅದರ ಪರಿಣಾಮದಿಂದುಂಟಾಗುವ ದುಷ್ಪರಿಣಾಮವು ಸಹ ಅಷ್ಟೇ ಸ್ಪಷ್ಟವಿದೆ.

ಘೋಷಾ ಪದ್ಧತಿಯಿಂದ ಪಾವಿತ್ರ್ಯ ಉಳಿಯಲಾರದು. ಪ್ರತ್ಯಕ್ಷವಾಗಿ ಘೋಷಾ ಪದ್ಧತಿಯು ಎಲ್ಲ ಕಡೆಗೆ ಒಂದೇ ಮಾದರಿಯದಿರದಿದ್ದರೂ ಪರಾವಲಂಬನದ ಅಥವಾ ಬಂಧನದಲ್ಲಿಟ್ಟ ಸ್ತ್ರೀಯರ ಪಾವಿತ್ರ್ಯ ಉಳಿಯುವದೆಂಬ ಕಲ್ಪನೆಯು ಎಲ್ಲ ದೇಶಗಳಲ್ಲಿ ಜಾತಿ ಮತಗಳಲ್ಲಿ ಸಾವಿರಾರು ವರ್ಷಗಟ್ಲೆ ರೂಢಿಯಲ್ಲಿರುವದರಿಂದ ಹೆಣ್ಣು ಮಕ್ಕಳ ಕಾರ್ಯಕ್ಕೆ ಹೆಣ್ಣು ಮಕ್ಕಳೇ ವೈರಿಗಳಾಗಿದ್ದಾರೆ. ಈ ಹೆಣ್ಣು ಮಕ್ಕಳ ಕಾರ್ಯದ ಪ್ರಚಾರವು ಮೊದಲೇ ಸಾಕಷ್ಟು ಆಗದಿದ್ದುದರಿಂದ, ವಿಶೇಷವಾಗಿ ಕರ್ನಾಟಕದಲ್ಲಿ ಎಳ್ಳಷ್ಟು ಆಗದಿದ್ದುದರಿಂದ ರಾಜಕಾರಣ ಅಥವಾ ಧರ್ಮಕಾರಣದಲ್ಲಿ ಸಿಗುವಷ್ಟು ಬೆಂಬಲ ಈ ಕಾರ್ಯಕ್ಕೆ ಸಧ್ಯಕ್ಕೆ ಸಿಗಲಾರದೆಂಬ ಅನುಭವವು ಪದೇಪದೇ ಬರುತ್ತದೆ.

೫-೧೨-೪೭:— ಯಾವದೇ ವ್ಯವಹಾರ ಸರಿಯಾಗಿ ನಡೆಯಬೇಕಾದರೆ ಗೊತ್ತಿದ್ದವರಿಂದ ಪ್ರಾರಂಭಮಾಡಿ ಗೊತ್ತಿಲ್ಲದವರ ಕಡೆಯಿಂದ ಸಹಾಯ ತೆಗೆದುಕೊಳ್ಳಬೇಕಾಗುತ್ತದೆ. ಒಂದು ವೇಳೆ ಸ್ವಾತಂತ್ರ್ಯದ ವಿಚಾರ ಕುಗ್ಗಿದರೂ ಸಹಕಾರ ಬೆಳೆಯುತ್ತದೆ. ಹೀಗೆ ಅನುಕೂಲತೆ ಇಲ್ಲದಿದ್ದರೆ ಕೆಲಸವನ್ನು ಬಿಡಬೇಕೆಂತಲ್ಲ. ಹೆಚ್ಚಿನ ಕಷ್ಟದಿಂದ ಅದು ಸಾಧ್ಯ. ಪರಿಸ್ಥಿತಿ ಬದಲಾದಂತೆ ಜಗತ್ತಿನ ವ್ಯವಹಾರಗಳೂ ಬದಲಾಗುತ್ತಿರುತ್ತವೆ. ಶ್ರೀ. ದಾ. ಇವರು ಒಮ್ಮೆ ಮುಂ. ಯಲ್ಲಿರುವಂಥ ಪ್ರಸಿದ್ಧ ಹೆಣ್ಣು ಮಕ್ಕಳ ಸಂಸ್ಥೆಗಳಿಗೆ ಹೋಗಿ ಅಲ್ಲಿ ವ್ಯಾಖ್ಯಾನ ಕೊಡುತ್ತೇನೆಂದು ಕೇಳಿದರೆ (ಗುರ್ತಿನವರಿಂದ ಪತ್ರ ತೆಗೆದುಕೊಂಡು ಹೋಗದ್ದರಿಂದ) ಅಲ್ಲಿನವರು ಯಾರೂ ಹಚ್ಚಿಕೊಳ್ಳಲಿಲ್ಲ. ಒಂದು ಹೆಣ್ಣುಮಕ್ಕಳ ಸಂಸ್ಥೆಯನ್ನು ತೆಗೆಯಲು ಹೊರಟ ಅದೇ ಉದ್ದೇಶಕ್ಕಾಗಿ ಹಗಲು ರಾತ್ರಿ ದುಡಿಯುತ್ತಿರುವ ಒಬ್ಬರು ವ್ಯಾಖ್ಯಾನ ಹೇಳುತ್ತೇನೆಂದರೆ ಅದರ ಕಡೆಗೆ ಲಕ್ಷಕೊಡಲಿಲ್ಲ. ಮತ್ತು ಅವರು ಏನು ಹೇಳುವರೋ ಎನ್ನುವದನ್ನು ಕೇಳಿಕೊಳ್ಳುವಷ್ಟು ಕುತೂಹಲವಿಲ್ಲ. ಇದರಿಂದ ಶ್ರೀ. ದಾ. ಇವರಿಗೆ ಸ್ವಲ್ಪ ಅಸಮಾಧಾನವಾಯಿತು. ಈ ಉದಾಹರಣೆಯಿಂದ ಇವರು ಕಲಿತದ್ದೇನೆಂದರೆ ಯಾರೇ ಸಮಷ್ಟಿಗೆ ಬರಲಿ ಅವರು ನಾಲ್ಕು ಮಾತುಹೇಳುತ್ತೇನೆಂದರೆ ಅವರ ಕಡೆ

ಯಿಂದ ನಾಲ್ಕು ಮಾತುಗಳನ್ನ ಕೇಳಲು ಅವಕಾಶ ಕೊಡುವದು, ಆದರೆ ಮುಂದೆ ಎರಡನೇ ಸಾರೆ ಹೇಳಬೇಕಾದರೆ ವಿಚಾರಮಾಡಿ ಅವರ ಮಾತಿನಲ್ಲಿ ಹುರುಳಿದ್ದಲ್ಲಿ ಅವರ ಕಡೆಯಿಂದ ವ್ಯಾಖ್ಯಾನ ಹೇಳಿಸತಕ್ಕದ್ದು. ಇಲ್ಲಿ ಮುಂದೆ ಬೈಠೆಯಲ್ಲಿ ಇವರೇ ಹೋಗಿ ಅಲ್ಲಿ ಇಲ್ಲಿ ಕೇಳಿಕೊಳ್ಳಲಾಗಿ ಒಂದೆರಡು ಕಡೆ ವ್ಯಾಖ್ಯಾನಗಳಾದವು. ಅಲ್ಲಿಗೆ ಶ್ರೀ. ದಾ. ಮಾ. ಮಾ. ಮತ್ತು ಶ್ರೀ. ದಾ. ಇವರ ತಮ್ಮಂದಿರು ಹೋಗಿದ್ದರು. ಇವರು ಬ್ಯಾ...ಗೆ ಹೋದಾಗ ಮಳೆಯಾಗುತ್ತಿತ್ತು. ಮತ್ತು ಇವರ ಹಿಂದಿನ ಸಂಸ್ಕಾರವು ಇನ್ನೂ ಪೂರ್ಣ ಅಳಿದಿಲ್ಲವಾದ್ದರಿಂದ ಊಟದ ಸಲುವಾಗಿ ಜಾತಿಮತಗಳ ತೊಂದರೆಯಾಗುತ್ತಿತ್ತು. ನಮ್ಮ ಈ ತಿಳುವಳಿಕೆಯಿಂದಲೇ ಕರ್ನಾಟಕವು ಹಿಂದುಳಿದಿದೆ. ಪುಣೆ, ಮುಂಬೈಗಳಲ್ಲಿ, ಮಹರ್ಷಿ ಕರ್ವೆಯಂಥವರಲ್ಲಿ ಈ ವಿಚಾರಗಳಿಲ್ಲದ್ದರಿಂದಲೇ ಆ ಊರುಗಳು ಮುಂದೊರೆಯಲು ಮಾರ್ಗವಾಗಿದೆ. ತಮ್ಮ ಕಾರ್ಯಕ್ಕಾಗಿ ಹೋಗಿರುವಾಗ ಹೀಗೆ ಮಾಡಬಾರದೆಂದು ಎಷ್ಟು ಮನಸ್ಸು ಗಟ್ಟಿ ಮಾಡಿದರೂ ಸಹ ಅನ್ಯರಲ್ಲಿ ಊಟ ಮಾಡಲು ಎಡಚನಿಸುತ್ತಿತ್ತು. ಬೆ....ವಿಗೆ ಹೋದಾಗ ಒಬ್ಬ ಲಿಂಗಾಯತರ ಮನೆಯಲ್ಲಿ ಊಟಮಾಡುವಾಗ ಮನಸ್ಸಿಗೆ ಎಡಚೆನಿಸಿತು. ಹೀಗೆ ಎಷ್ಟೋ ಉದಾಹರಣೆಗಳಾಗಿವೆ. ಈ ಮಡಿ ಮೈಲಿಗೆಯ ವಿಚಾರದಿಂದ ಕಾರ್ಯಕ್ಕೆ ಎಷ್ಟೋ ವಿಘ್ನಗಳು ಬರುತ್ತವೆ.

೩೦-೧೨-೪೭:— ದೇಹದಲ್ಲಿ ಯಾವದೇ ಒಂದು ಅಂಗವು ಊನವಾಗಿದ್ದರೆ ಅದು ಯಾವರೀತಿಯಲ್ಲಾದರೂ ಕಾಡುತ್ತದೆ. ಶ್ರೀ. ದಾ. ಇವರು ತಮ್ಮ ಬಹಿರ್ದಿಶೆಯ ಕಾರ್ಯ ತೀರಿಸಿಕೊಂಡು ಭಾವಿಯಿಂದ ಮನೆಗೆ ಬರುವಾಗ ಕಾಲುಜಾರಿ ಕೆಸರಿನಲ್ಲಿ ಬಿದ್ದು ಮೈ ಕೈ ಎಲ್ಲ ಕೆಸರಾಯಿತು. ಇವರು ಭಾವಿಯಿಂದ ಮನೆಗೆ ಬರುವಾಗ ಪೇಟೆಯಲ್ಲೇ ಹಾಯ್ದು ಬರಬೇಕಾಗುತ್ತಿತ್ತು. ಆಗ ಅಲ್ಲಿಯ ಜನರೆಲ್ಲ ಬೇಕಾದಷ್ಟು ನಕ್ಕರು ಮನೆಗೆ ಬಂದೊಡನೆ ಶ್ರೀ. ಮಾ. ಇವರ ಎದುರಿಗೆ ತಮ್ಮ ಅಬ್ರು ಉಳಿಯುವ ಸಲುವಾಗಿ ಕೆಸರಿನಲ್ಲಿ ಸಿಕ್ಕ ಎಮ್ಮೆಯ ಕರುವನ್ನು ತೆಗೆದನೆಂದೂ, ಅದನ್ನು ತೆಗೆಯಲು ಹೋದಾಗ ತಮ್ಮ ಮೈ ಕೆಸರಾಯಿತೆಂದೂ ಹೇಳಿ

ಹರು. ಹ....ರಲ್ಲೂ ಸಹ ಇಂಥಹದೇ ಒಂದು ಪ್ರಸಂಗ ಒಂದಿತ್ತು. ಇವರ ಒಂದು ಕಾಲು ಹಾಗೇ ಉನಾಗಿರುವದರಿಂದ ಎಷ್ಟೋ ಕೆಲಸಗಳಲ್ಲಿ ಇವರಿಗೆ ತೊಂದರೆಯೇ ಒದಗುತ್ತಿರುತ್ತದೆ. ಇದಲ್ಲದೆ ಈ ಕೃತ್ರಿಮ ಸಂಸ್ಕಾರ, ಸಂಸ್ಥೆಗಳಲ್ಲಿ ದೊಡ್ಡ ಸಣ್ಣ ತಾರತಮ್ಯವಿ ಎವರಿ ದಲೂ ಎಷ್ಟೋ ಅನಾನುಕೂಲಗಳಾಗುತ್ತವೆ. ಇವರು ಹ....ರಕ್ಕೆ ಹೋದಾಗ ಅವಳಿದ ಮನೆಯವರು ಇವರಿಗೆ ಪಾಯಖಾನೆ ತೋರಿಸದೆ ನದಿಯ ಕಡೆ ಹೋಗಲು ಹೇಳಿದರು ಅಲ್ಲಿ ಸಾವಿರಾರು ಜನರ ಗಂಪಿದ್ದುದರಿಂದ ಆ ಜಾಗೆಯಲ್ಲಿ ತಂಬಿಗೆ ತೆಗೆದುಕೊಂಡು ಹೋಗುವದು ಇವರಿಗೆ ನಾಚಿ ಕೆಯ ಸಂಗತಿಯಾಗಿತ್ತು. ಕೋ. ಕ್ಕೆ ಹೊದಾಗಲೂ ಸಹ (ಇವರ ಲಗ್ನಕ್ಕಾಗಿ) ಅಲ್ಲಿ ಹೆಂಗಸರು ಗಂಡಸರು ಒಟ್ಟಿಗೆ ಬೈಲುಕಡೆಗೆ ಹೋಗುವ ಪದ್ಧತಿ ಇದ್ದುದರಿಂದ ಇವರಿಗೆ ಅಲ್ಲಿ ಹೋಗುವದು ಹೇಗೆಂಬ ಪ್ರಶ್ನೆ ಹುಟ್ಟಿತು. ನಂತರ ಹೆಣ್ಣಿನ ಮನೆಯವರು ಮನೆಯ ಹಿತ್ತಲಲ್ಲಿ ಹೋಗಲು ಹೇಳಿದರು. ಆದರೆ ಆ ಹಿತ್ತಲಲ್ಲಿ ಹಂದಿಕಾಟ, ಇಷ್ಟೇಕೆ ದೊಡ್ಡ ದೊಡ್ಡ ಬೆಂಗಳೂರಂಥಹ ಪಟ್ಟಣಗಳಲ್ಲಿ ಸಹ ಇವರಿಗೆ ಅಲ್ಲಿಯ ಪಾಯಖಾನೆಯ ಪದ್ಧತಿಯ ನಿಮಿತ್ತ ಈ ರೀತಿ ತೊಂದರೆಯಾಗುತಿತ್ತು. ಇವರಿಗೆ ಹೆಂಗಸರೊಡನೆ ಊಟಕ್ಕೆ ಕೂಡುವದೆಂದರೆ ಸಹ ಜೀವದ ಸುತ್ತು ಬರುತ್ತಿತ್ತು, ಮತ್ತು ಅವರೊಡನೆ ಊರಿಗೆ ಹೋಗಲು ಸಹ ನಾಚುತ್ತಿದ್ದರು, ಮು. ದಲ್ಲಿ ಇವರ ಅಪ್ತರ ಮನೆಯಲ್ಲಿ (ಇವರು ಇನ್ನೂ ಸಣ್ಣವರಿದ್ದಾಗ) ಊಟಕ್ಕೆ ಹೆಂಗಸರ ಪಂಕ್ತಿಯಲ್ಲಿ ಕುಳ್ಳಿರಿಸಿದರೆ ಇವರಿಗೆ ಎಡಚೆನಿಸಿ ಅರ್ಧಮರ್ಧ ಊಟ ಮಾಡುತ್ತಿದ್ದರು. ಶ್ರೀ. ಮಾ. ಇವರೊಡನೆ ವರ್ಗ ಣಿಗೆ ಹೋಗುವ ಪ್ರಸಂಗ ಒಂದಾಗ ನಾಚುತ್ತಿದ್ದರು. ಆದರೂ ಕಾರ್ಯದ ಕಲ್ಪನೆಯಿಂದ ಅದನ್ನು ಬದಿಗೊತ್ತುತ್ತಿದ್ದರು. ಕೃತ್ರಿಮ ಸಂಸ್ಕಾರದಿಂದ ನೀತಿ ಉಳಿಯುವದೆಂದು ಹೇಳುತ್ತಾರೆ. ಆದರೆ ಅದು ಹೇಗೆ ಉಳಿದಿದೆ ಯೆಂದು ಹೇಳುವದು ಕಠಿಣವಾಗಿದೆ. ಗಂಡು ಹೆಣ್ಣಿನ ಸ್ವಭಾವವು ಪರಸ್ಪರ ಪೂರಕವಾಗಿದೆ ಯನ್ನುವದನ್ನು ತಿಳಿಯುವದೇ ಕಠಿಣವಾಗಿದೆ. ಗಂಡು ಹೆಣ್ಣು ಕೂಡಿರದಿದ್ದರೆ ಜಗತ್ತು ನಡೆಯುವದು ಕಠಿಣ ವಾಗುತ್ತಿತ್ತು ಶ್ರೀ. ದಾ. ಇವರ ಕೃತ್ರಿಮ ನಾಚಿಕೆಯ ಪ್ರಭಾವದಿಂದಲೇ ಇವರಿ

ಮೂಲವ್ಯಾಧಿಯ ಬಾಧೆಯಾಗಿದೆ. ಮೊದಲು ನಾಚಿಕೆಯಿಂದು ದೇಹದ ರಚನೆಯ ವಿರುದ್ಧ ಹೋಗಿದ್ದರಿಂದ ಮುಂದೆ ಅನಾರೋಗ್ಯದ ತವರು ಮನೆಯಾಗಬೇಕಾದ ಪ್ರಸಂಗ ಬಂದಿತು. ಕೃತ್ರಿಮ ಸಂಸ್ಕಾರಗಳ ಮೂಲಕ ಈ ರೀತಿ ನಿಜಸಂಗತಿಯ ವಿಚಾರ ಮಾಡದೆ ಸ್ವಭಾವದ ತಾರತಮ್ಯ, ದೇಹದ ರಚನೆ ಇವುಗಳ ವಿರುದ್ಧ ಹೋಗುವದರಿಂದ ಅನಾರೋಗ್ಯಕ್ಕೆ ಗುರಿಯಾಗಬೇಕಾಗುತ್ತದೆ.

೩೧–೨೨–೪೭:— ಹೆಣ್ಣುಮಕ್ಕಳು ಬಂಧನದಿಂದ ಪಾವಿತ್ರ್ಯವನ್ನು ಕಾಯ್ದುಕೊಳ್ಳುವರೆನ್ನುವದು ಸುಳ್ಳು ಮತ್ತು ಬೇರೆ ಬೇರೆಯವರ ಕೈಯಲ್ಲಿ ಊಟ ಮಾಡಿದರೆ ಅವರ ಧರ್ಮ ಕೆಡುವದೆನ್ನುವ ಹೆದರಿಕೆಯಿಂದಲೂ ಸಹ ಅವರ ಮನಸ್ಸು ಕೆಡುತ್ತದೆ. ವಿವೇಕಾನಂದ ಮೊದಲಾದವರು ಹೇಳಿದಂತೆ "ವಸುದೇವ ಕುಟುಂಬಕಂ" ಎಂದು ಸನ್ಯಾಸಿಗಳಿಗೆ ಮಾತ್ರ ಎಲ್ಲವೂ ಒಂದೊಂದು ತಿಳಿಯುವದು. ಬಾಕಿಯವರಿಗೆ ಇದರ ಸಂಬಂಧ ವಿಲ್ಲದಂತೆ ನಡೆಯುವದು ತಪ್ಪು. ತಿರುಪತಿ ಮೊದಲಾದ ಗುಡಿಗಳಲ್ಲಿ ಈಗ ಜಾತಿಭೇದವಿಲ್ಲ. ಎಷ್ಟೋ ಜನರ ಮನೆಗಳಲ್ಲಿ ದೊಡ್ಡದೊಡ್ಡ ಹುದ್ದೇದಾರರಿರುತ್ತಾರೆ. ಮತ್ತೆ ಕೆಲವರಲ್ಲಿ ಇಂಗ್ಲಂಡಿಗೆ ಹೋಗಿಬಂದ ಅತಿಥಿಗಳನ್ನು ಸಹ (ಜಾತಿಭ್ರಷ್ಟರಾಗಿದ್ದರೂ ಸಹ) ತಮ್ಮ ಮನೆಯ ಒಳ ನಡುಗ್ಗಲಲ್ಲಿ ಊಟಕ್ಕೆ ಕರೆದು ಕೂಡ್ರಿಸುತ್ತಾರೆ. ಇದು ಕೇವಲ ದೊಡ್ಡಿಸ್ತನದ ಸಲುವಾಗಿ. ಆದರೆ ಎಷ್ಟೋ ಸ್ಥಳಗಳಲ್ಲಿ ಶೀ. ದಾ. ಇವರು ವರ್ಗಣಿಗೆ ಹೋದಾಗ (ಶ್ರೀ. ಮಾ. ಇವರೂ ಸಹ) ಇವರನ್ನು ಹೊರಗೆ ಕೂಡ್ರಿಸಿ ಊಟಕ್ಕೆ ಹಾಕುತ್ತಿದ್ದರು. ಹೆಣ್ಣುಮಕ್ಕಳು ಕಡಿಗಾದಾಗ ಹೊರಗೆ ಕೂಡದೆ ಸಂಸ್ಥೆಯಲ್ಲಿ ಏಕರೀತಿಯಾಗಿರುವದೆಂದು ಕೇಳುತ್ತಾರೆ. ಸಂಸ್ಥೆಯಿಂದ ವರ್ಗಣಿಗೆ ಹೋದವರನ್ನು ಎಷ್ಟೋ ಮನೆಗಳಲ್ಲಿ ಇಳಿಸಿ ಕೊಳ್ಳುವದಿಲ್ಲ. ಭಾವಿಗಳಲ್ಲಿ ಇವರು ಈಸಲಿಕ್ಕೆ ಹೋದಾಗ ಅಡ್ಡಿ ಮಾಡುತ್ತಾರೆ. ಆದರೆ ಅದೇ ಬಾವಿಯಲ್ಲಿ ಊರಿನ ಕಡೆಗಾದ ಹೆಣ್ಣುಮಕ್ಕಳು ಬಂದು ತಮ್ಮ ವಸ್ತ್ರಗಳನ್ನೊಗೆದುಕೊಂಡು ಸ್ನಾನಮಾಡಿ ಹೋಗುತ್ತಿರುತ್ತಾರೆ. ಆದಕ್ಕೆ ವೈಲಿಗೆ ಅನ್ನುವದಿಲ್ಲ. ಈ ತೆರನಾಗಿ ಜಾತಿ

ಬೋಧದ ಕಲ್ಪನೆ ಹಾಗೂ ಎಷ್ಟೋ ತಪ್ಪು ಕೃತ್ರಿಮ ಸಂಸ್ಕಾರಗಳಿಂದವಿಚಾ
ಶಕ್ತಿ, ತರ್ಕಶಕ್ತಿ ಇವು ನಷ್ಟವಾಗಿ ಸಾಮಾನ್ಯ ಜನರು ಪರಂಪರಾಗ
ರಾಗಿ, ಅಂಧಾನುಕರಣಿಗಳಾಗಿ ಸೃಷ್ಟಿ ಧರ್ಮಕ್ಕೆ ತೀರ ವಿರುದ್ಧ ವರ್ತ
ನಡೆಸಿದ್ದಾರೆ. ಇದರಿಂದ ಲಾಭವು ಎಷ್ಟೇ ಕಂಡಾಗ್ಯೂ ಕಾಲಾಂತರದಿಂ
ಅದರಿಂದ ಬಹಳ ನಷ್ಟ ಉಂಟಾಗುತ್ತದೆ.

೧-೧-೪೮:-- ಮನುಷ್ಯನಿಗೆ ಯಾವ ವಿಷಯ ಸೇರುತ್ತಿರುತ್ತದೆಯೋ ಅವನು ಅದರ ಅಭ್ಯಾಸವನ್ನು ಮಾಡುತ್ತಿರುತ್ತಾನೆ. ಅದರ ವಿಷಯ ಅ ನಿಗೆ ಒಡಮೂಡದೇ ಹೋಗುವದಿಲ್ಲ. ಇವರು ಮೂವರೂ ವರ್ಗಣಿ ಹೋದಾಗ ಮೊದಲಿನಂತೆಯೇ ಇವರ ತಮ್ಮಂದಿರು ಹೆಣ್ಣುಮಕ್ಕ ಮೇಲೆ ಹೇಗೆ ರಾಜಕಾರ್ಯದೃಷ್ಟ್ಯಾ ಸರಕಾರದಿಂದ ಅತ್ಯಾಚಾರವಾಗು ತ್ತದೆ, ಸಾಮಾಜಿಕ ರೀತ್ಯಾ ಜನರಿಂದ ಎಷ್ಟು ಅತ್ಯಾಚಾರವಾಗು ತ್ತದೆ ಎಂದು ಹೇಳುತ್ತಿದ್ದುದರಿಂದ ಜನರಿಂದಾಗಲೀ, ಪೋಲೀಸರಿಂದಾ ಗಲೀ ತ್ರಾಸಾಗುತ್ತಿತ್ತು. ಶ್ರೀ. ಮಾ. ಇವರ ವ್ಯಾಖ್ಯಾನದ ವಿಷಯಕ್ಕಾ ದರೂ ಅವರ ಟೀಕಾ ಇದ್ದುದರಿಂದ ಅವರಿಬ್ಬರಿಗೂ ವಾಗ್ವಾದ ಆಗುತ್ತಿತ್ತು. ಆದರೆ ಅವರನ್ನು ಬರಬೇಡವೆಂದು ಹೇಳಿದರೆ ಅವರ ಮನಸ್ಸಿಗೆ ಎಲ್ಲಿ ಕೆಟ್ಟೆ ಸಿಕೊಳ್ಳುವರೋ ಎಂದು ಸೌಮ್ಯವಾಗಿದ್ದರು. ಆದರೆ ಅವರಾದರೂ ಸ್ವ ಸೂಕ್ಷ್ಮನಿರೀಕ್ಷಕರಿದ್ದುದರಿಂದ ಅವರಾಗಿಯೇ ಇವರೊಡನೆ ಬರುವದನ್ನು ಬಿಟ್ಟರು, ಮುಂದೆ ಇವರಿಬ್ಬರೇ ಊರೂರು ತಿರುಗಹತ್ತಿದರು. ಅಲ್ಲಲ್ಲಿ ಭಾಷ ಮಾಡುವಾಗ ರಾಜಕಾರಣದ ಆಂದೋಲನದ ಸಂಪರ್ಕ ತಟ್ಟಬಾರದೆಂದು ಮೊದಲೇ ಆ ಊರಿನ ಮೇಲಧಿಕಾರಿಗಳಿಗೆ ತಮ್ಮ ಉದ್ದೇಶವನ್ನು ತಿಳಿ ನಂತರ ಶ್ರೀ. ದಾ. ಇವರು ಜಾಂಗಟೆ ಬಾರಿಸಿ ತಮ್ಮ ವ್ಯಾಖ್ಯಾನ ವಿದೆಯೆಂದು ಸಾರುತ್ತಿದ್ದರು. ಶ್ರೀ. ಮಾ. ಇವರು ವ್ಯಾಖ್ಯಾನ ಕೊಡು ತ್ತಿದ್ದರು. ಸೂಟಿಯಿದ್ದಾಗ ಮಾತ್ರ ಶ್ರೀ. ಪ. ಇವರು ಇವರೊಡನೆ ಬರುತ್ತಿ ದ್ದರು. ನಂತರ ಶ್ರೀ. ಕೃ. ಕ. ಇವರನ್ನು ಕರೆದುಕೊಂಡು ಹೋಗಬೇಕೆಂದು ನಿಶ್ಚಯಿಸಿದರು. ಸಾಮಾನ್ಯ ಜನರಿಗೆ ಶ್ರೀ. ಮಾ. ಇವರ ಉಪನ್ಯಾಸವ ಬಹಳ ಸೇರುತ್ತಿತ್ತು. ಅವರ ವಿಚಾರ ಸರಣಿ, ಹಳೆ-ಹೊಸ ವಿಚಾರದೊ

ಗಿನ ಒಳ್ಳೇದರ ವಿಲಕ್ಷಣ ಧಾರ್ಮಿಕವಾದ ಉದಾಹರಣೆಗಳು, ಸಂಗೀತ ಮಿಶ್ರವಾದ ಸ್ಪಷ್ಟ ಮಧುರ ಧ್ವನಿ ಇವು ಜನರ ಮನವನ್ನು ಆಕರ್ಷಿ ಸುತ್ತಿದ್ದವು. ಎಷ್ಟೋ ವಿದ್ವಾಂಸರೂ ಸಹ ಅವರ ಭಾಷಣಕ್ಕೆ ನೈಪುರತು ಅವರಿಗೆ ಆಧುನಿಕ ಗಾರ್ಗಿ, ಮೈತ್ರೇಯಿ ಮತ್ತು ಕರ್ನಾಟಕದ ಸರೋಜಿನಿ ನಾಯಡುಯೆಂದು ಶ್ರೀ. ಮಾ. ಇವರನ್ನು ಗೌರವಿಸಿದರು. ಇಂಥವರೇ ನಿಜವಾಗಿ ಚಾಲಕರೆನ್ನಬಹುದು.

೨-೧-೪೮:— ಇನರ್ಶಿಯಾ ಅಂದರೆ ಇದ್ದ ಸ್ಥಿತಿಯಲ್ಲಿಯೇ ಇರು ವದು. ಮನುಷ್ಯನ ಧರ್ಮದಲ್ಲಿ ಒಬ್ಬನು ತಲೆಬೇಸರು ಬರುವವರೆಗೆ ಒಂದೇ ಸ್ಥಳದಲ್ಲಿರಬೇಕೆಂದು ಹವಣಿಸುತ್ತಾನೆ. ದೇವರು ಬೇರೆಬೇರೆ ಪ್ರಾಣಿಗಳನ್ನು ಅಲ್ಲಲ್ಲಿ ಹುಟ್ಟಿಸಿರುವನು, ಆದರೆ ಮನುಷ್ಯನು ದೇವರಿಗಿಂತ ಒಂದು ಕೈ ಮೇಲಾಗಿರುವನೆಂದು ತಿಳಿದದ್ದರಿಂದ, ಅವನು ದೇವರ ನಿಯ ಮದ ವಿರುದ್ಧ, ತಾನು ಬೇರೆಯವರೊಡನೆ ಕೂಡಿ ಗುಂಪಾಗಿದ್ದರೆ ಅದರಲ್ಲಿ ಒಂದು ಶಿಸ್ತು ಇರುವದೆಂದೂ, ದೇವರನ್ನೇ ಇದರ ಸಬಕ್ಷನೆಂದೂ ತಿಳಿದು ಹಾಗೇ ಮಾಡಹತ್ತಿದನು ಆದರೆ ಮುಂದೆ ಈ ಕೂಡಿರುವ ಪದ್ಧತಿಗೂ ಬೇಸತ್ತು ಈ ಕೂಡಿರುವ ಪ್ರಸಂಗದಲ್ಲಿಯೇ ಜಗಳಾಡಹತ್ತಿ ಬೇರೆಯಾಗಲು ಹವಣಿಸುವನು. ಇದಾದರೂ ಇದ್ದದ್ದು ಬರಲು ಆಗುವದೆಂಬ ತತ್ವಕ್ಕನುಗುಣ ವಾಗಿದವರು. ಆದರೆ ಅದನ್ನು ಬಿಟ್ಟಿರುವದು ಮತ್ತು ಅದರಲ್ಲಿ ಬದಲು ಮಾಡುವದು ಒಂದು ರೀತಿಯಲ್ಲಿ ಕಠಿಣವಾಗಹತ್ತಿತು. ಇದರಿಂದ ಜನಗಳಲ್ಲಿ ಗೊಂದಲವೇ ಸುರುವಾಗಿ ಅದರಲ್ಲಿ ಯುಕ್ತಿಪ್ರಯುಕ್ತಿಗಳು ಹುಡುಕಹತ್ತಿದರು. ಇದರಿಂದಲೇ ಈಗ ಪ್ರಪಂಚವು ತುಂಬಿಹೋಗಿರುತ್ತದೆ. ಬೇರೆಬೇರೆ ವ್ಯಕ್ತಿಗಳಷ್ಟು ಬೇರೆಬೇರೆ ಗುಣಗಳಿದ್ದು ಅವರವರಲ್ಲಿ ತಾಕಲಾಟಗಳಾಗಹತ್ತಿ ಅವರವರ ತತ್ವ, ಹಕ್ಕುಗಳಿಗಾಗಿ ಜಗಳಾಡಹತ್ತಿದರೂ ಸಹ, ಒಬ್ಬರನ್ನೊ ಬ್ಬರು ಬಿಟ್ಟಿರುವದು ಅದರಿಂದ ಸಾಧ್ಯವಾಗದಾಗಿದೆ. ಕೂಡಿರುವದ ರಿಂದಲೇ ಬೇರೆಬೇರೆ ಶೋಧ ಸುಖ, ಸಂಪತ್ತುಗಳು ಸಿಗುವದೆಂಬದನ್ನು ಮನಗಂಡಿರುವದರಿಂದ ಅದರ ವಿರುದ್ಧ ಹೋಗಲು ಹಿಂಜರಿಯುತ್ತಾರೆ.

. ಈ ಎಲ್ಲ ತಾಕಲಾಟಗಳಲ್ಲಿ ಹೆಂಗಸರ ಸ್ಥಿತಿಯಂತೂ ಬಹಳ ದುಃಖದ್ದಾಗಿದೆ. ಶ್ರೀ. ಕೃ. ಕ. ಇವರ ಮನೆಯನ್ನು ಒಬ್ಬ ಬ್ರಾಹ್ಮಣನಿಗೆ ದಾನ ಕೊಡುವದಿದ್ದು ಅದರ ಸಲುವಾಗಿ ಶ್ರೀ. ಕೃ. ಕ. ಇವರ ಸಹಿ ತೆಗೆದುಕೊಂಡರು. ಮುಂದೆ ಮನೆಯನ್ನು ದಾನ ಕೊಟ್ಟದ್ದರಿಂದ ಇವರಿಗೆ ಇರಲು ಮನೆ ಇಲ್ಲದ್ದರಿಂದ ಒಂದು ಕೋಣೆಯನ್ನು ಬಾಡಿಗೆ ಹಿಡಿದು ಮಕ್ಕಳೊಡನೆ ಅಲ್ಲಿರಬೇಕಾಯಿತು. ಅವರ ಯಜಮಾನರು ಎಲ್ಲೋ ಫರಾರಿಯಾದರು.

೩-೧-೪೮:— ಇಂಥ ಪ್ರಸಂಗ ಬಂದೊಡನೆ ಮೂರು ಮಕ್ಕಳನ್ನು ಕರೆದುಕೊಂಡು ಹೇಗೆ ಮಾಡಬೇಕೆನ್ನುವದು ತಿಳಿಯಲಿಲ್ಲ. ಗಂಡ ದೇಶಾಂತರ ಹೊರಟುಹೋದನು. ತೌರುಮನೆಯವರು ಶ್ರೀಮಂತರಿದ್ದು ಇವರನ್ನು ತಮ್ಮ ಮನೆಗೆ ಬಾಯೆಂದು ಕರೆದರೂ ಸ್ವಾಭಿಮಾನದ ಮೂಲಕ ಇವರು ಹೋಗಲಿಲ್ಲ. ಕೆಲವರು ಮಾತು ಕೊಟ್ಟ ಮೇಲೆ ಅದರಂತೆ ನಡೆಯುತ್ತಾರೆ. ಮತ್ತೆ ಕೆಲವರು ಮಾತಿಗೆ ಮೊದಲೇ ಸರಿಯಾಗಿ ನಡೆಯುತ್ತಾರೆ; ಕೆಲವರು ಕೊಟ್ಟಮಾತು ಮೀರುವದಿಲ್ಲ; ಕೆ. ರಿನ ಹೊಲವನ್ನು ಶ್ರೀ. ಕೃ. ಕ. ಇವರ ಅಪ್ಪೇಷ್ಟರ ಹೆಸರಿನಲ್ಲಿ ಮಾಡಿದರು. ಆದರೆ ಇದು ಅವರಿಗೆ ಗೊತ್ತಿರಲಿಲ್ಲ. ಆದರೂ ಸಹ ಇವರೇ ಹೋಗಿ ಆ ಹೊಲದ ಉತ್ಪನ್ನ ತರುತ್ತಾರೆ. ಮೊನ್ನೆ ಈ ಸಂಗತಿ ಅಕಸ್ಮಾತ್ತಾಗಿ ಗೊತ್ತಾಗಲು ಯಾರ ಹೆಸರಿನಲ್ಲಿ ಹೊಲವಿರುವದು ಅವರು ಶ್ರೀ. ಕೃ. ಕ. ಇವರಿಗೆ ಮರಳಿ ಕೊಡಲು ಸಿದ್ಧರಾಗಿದ್ದಾರೆ. ಇಂಥ ವಿವೇಕಶಾಲಿಗಳು ಸಿಗುವದು ಬಹಳ ಅಪರೂಪ; ಇವರು ತಮ್ಮ ಜೀವನವನ್ನು ಕಳೆಯಲು ಅಲ್ಲಿ ಇಲ್ಲಿ ಅಡಿಗೆಮಾಡಿ ಪೋಲಕ ಹೊಲಿದು ಜೀವನವನ್ನು ಮಾಡಹತ್ತಿದರು. ಒಮ್ಮೆ ಇವರು ಶ್ರೀ. ಸ. ಇವರ ಮನೆಗೆ ಹೋದಾಗ ಅವರು ಸಂಸ್ಥೆಯಲ್ಲಿ ಹೋಗಿ ಕೆಲಸಮಾಡಲು ಇಚ್ಛಿಸುವರೋ? ಎಂದು ಕೇಳಲು ಇವರಾದರೂ ಒಪ್ಪಿದರು. ಇವರು ಮನೆ ಮನೆ ತಿರುಗಹತ್ತಿದ್ದರಿಂದ ಜನರು ಇವರ ಮೇಲೆ ಕೆಟ್ಟ ಆರೋಪಣೆಯನ್ನು ಹೊರಿಸಹತ್ತಿದ್ದರು.

ಈ ಎಲ್ಲ ಇಕ್ಕಟ್ಟಿನಿಂದ ಪಾರಾಗಲು ಅವರು ಒಪ್ಪಿಗೆ ಇತ್ತಿ ಸಂಪ ಸ್ಥೆಗೆ ಬಂದರು. ಸಂಸ್ಥೆಯಲ್ಲಿ ಈ ಮೊದಲೇ ಒಬ್ಬಾಕೆಯು ಹೊಲಿಗೆ ಹೊಲಿಯಲು ಸೇರಿದ್ದಳು ಆಕೆಯು ಈ ಮೊದಲು ಸಂಸ್ಥೆಯಲ್ಲಿದ್ದವಳು ಶ್ರೀ. ಕೃ. ಕ. ಇವರು ಒಳ್ಳೇ ಚಟುವಟಿಕೆಗಾರರಿದ್ದು ಕೆಲಸವನ್ನು ಸರಿಯಾಗಿ ನಡೆಸಿಕೊಂಡು ಹೋಗುತ್ತಿದ್ದುದರಿಂದ ಅವರೊಡನೆ ಅವಳು ಜಗಳ ಕದನಮಾಡಹತ್ತಿದಳು; ಹೊಟ್ಟೇಕಿಚ್ಚು ಸುರುವಾಯಿತು. ತೀ. ದಾ. ಶ್ರೀ. ಕೃ. ಇವರಿಬ್ಬರ ಮೇಲೂ ದೋಷಾರೋಪಣೆಯನ್ನು ಹೊರಿಸ ಹತ್ತಿದರು. ಹಿರಿಯವರಾದರೂ ಅವರಿಗೆ ಉಪದೇಶವನ್ನು ಮಾಡಹತ್ತಿ ದರು. ಶ್ರೀ. ಕೃ. ಕ. ಇವರ ಗಂಡನನ್ನಾದರೂ ಈಗ ಸಂಸ್ಥೆ ಯಲ್ಲಿ ಮಾಸ್ತರರೆಂದು ಸೇರಿಸಿಕೊಂಡರು. ಅವರು ಕೆಲಸಕ್ಕೆ ಬಂದು ತಮ್ಮ ಮಟ್ಟಿಗೆ ತಾವು ಹೋಗದೆ ಕೃ. ಕ. ಇವರ ಮೇಲೆ ನಿರೀಕ್ಷಣ ಮಾಡಹತ್ತಿ ಅವರನ್ನು ಇವರೊಡನೆ ಏಕೆ ಮಾತಾಡಿದಿ? ಅಲ್ಲೇಕೆ ಕೂತಿ; ಇಲ್ಲೇಕೆ ನಿಂತಿ; ಎಂದು ಲೇಖದ ಮೂಲಕ ಕೇಳಹತ್ತಿದರು. ಇದರಿಂದ ಇವ ರಿಗೆ ಬಹಳ ತ್ರಾಸಾಗಿ ಏನು ಮಾಡಬೇಕೆಂದು ತಿಳಿಯದೆ ಮಾ. ಮಾ. ಮತ್ತು ತೀ. ದಾ. ಇವರೊಡನೆ ಕೇಳಹತ್ತಿದರು. ಆದರೆ ಇವರ ಯಜ ಮಾನರು ಕಾಯಿದೆಯಿಂದ ಹೆಂಡತಿಯ ಮೇಲೆ ಏನು ಮಾಡಲೂ ಬಾರ ದಂತಿದ್ದುದರಿಂದ ಊರಿನಲ್ಲೆಲ್ಲ ಇವರ ಹೆಸರಿನಲ್ಲಿ ಮತ್ತು ಸಂಸ್ಥೆಯ ಚಾಲಕರ ಹೆಸರಿನಲ್ಲಿ ಆರೋಪಹೊರಿಸುತ್ತಾ ತಿರುಗಾಡಹತ್ತಿದರು.

ಸೃಷ್ಟಿನಿಯಮಕ್ಕನುಗುಣವಾಗಿ ಪ್ರತಿಯೊಂದು ವ್ಯಕ್ತಿಯು ಹೆಣ್ಣಾಗಲಿ ಗಂಡಾಗಲೀ ಸ್ವತಂತ್ರವಿದ್ದು ತನ್ನ ಸ್ವಾತಂತ್ರ್ಯ ಪ್ರಸ್ಥಾಪಿಸಲು ಯತ್ನಿ ಸುವದು. ಆದರೆ ಸಂಸ್ಕಾರವೆಂಬ ಕೃತ್ರಿಮ ನಿಯಮಗಳಿಂದ ಲಗ್ನದ ಮೂಲಕ ಗಂಡಿಸಿನ ಅಧಿಕಾರವು ಹೆಣ್ಣಿನ ಮೇಲೆ ಅನಿಯಂತ್ರಿತ ಇರುವದ ರಿಂದ ಅವನು ಹೆಂಗಸರ ಮೇಲೆ ತನ್ನ ಹಕ್ಕು ನಡಿಸುವನು. ಮತ್ತು ಯಜಮಾನಗಿರಿಯ ಹಕ್ಕಿನಿಂದ ಸಂಶಯಕ್ಕೊಳಪಟ್ಟು ಹೆಂಡತಿಯನ್ನು ಕಾಡುವನು. ಇದರ ದುಷ್ಪರಿಣಾಮಗಳು ಮಕ್ಕಳ ಮೇಲೆ ಸಹಜವಾಗಿ ಆಗುವವು. ಕೃತ್ರಿಮ ನಿಯಮಗಳ ದುಷ್ಪರಿಣಾಮಗಳನ್ನು ತಪ್ಪಿಸಬಹುದು.

ಆದರೆ ಸೃಷ್ಟಿನಿಯಮುಗಳನ್ನು ಕಿಂಚಿತ್ತಾದರೂ ಭಂಗಮಾಡಿದರೆ, ಶಿಕ್ಷೆ ಸಿಗದೆ ಹೋಗಲಾರದು. ಯಾವಾಗಲೂ ಕೃತ್ರಿಮ ನಿಯಮಗಳಿಗಿಂತ ಸೃಷ್ಟಿ ಅಥವಾ ದೇವರ ನಿಯಮುಗಳು ಶ್ರೇಷ್ಠವೆಂಬ ಮಾತು ಯಾವಾಗಲೂ ಮರೆಯ ಕೂಡದು.

೪-೧-೪೮:— ಇಲ್ಲಿಗೆ ಒಬ್ಬ ಸನ್ಯಾಸಿಯು ಬಂದಿದ್ದು ಅವನಿಗೆ ನಾಲ್ಕಾರು ಜನ ಶಿಷ್ಯರಿದ್ದರು. ಊರಿನಲ್ಲೆಲ್ಲಾ ಅವನ ಕೀರ್ತಿಯು ವಿವಿಧ ರೀತಿಯಿಂದ ಹಬ್ಬಿತ್ತು. ಮಕ್ಕಳಾಗದರಿಗೆ, ರೋಗಿಗಳಿಗೆ ಇವನು ತನ್ನ ತಪೋಬಲದಿಂದ ನೆಟ್ಟಗೆ ಮಾಡುತ್ತಾನೆಂದೂ, ನೀರಿನಿಂದ ಹಾಲು ತುಪ್ಪ ಮಾಡುವನೆಂದೂ ಇದೇ ತೆರನಾಗಿ ಅದ್ಭುತ ಕಾರ್ಯಗಳನ್ನು ಮಾಡಿ ತೋರಿಸುತ್ತಾನೆಂದೂ ಇನ್ನೂ ಏನೇನೋ ಹಬ್ಬಿತ್ತು. ಇವೆಲ್ಲವೂ ಶಿಷ್ಯರಿಂದ ಹರಡುತ್ತವೆ, ಊರಿನಲ್ಲಿ ಒಬ್ಬರಿಗೆ ಒಂದು ವಿಷಯ ತಿಳಿದೊಡನೆ ಅದಕ್ಕೆ ಉಪ್ಪು, ಖಾರ ಹಚ್ಚಿ ಕೈ ಕಾಲುಗಳು ಹುಟ್ಟಿ ಇನ್ನೊಬ್ಬರ ಕಿವಿಯಲ್ಲಿ ಬಂದು ಸೇರುತ್ತವೆ. ಹೀಗೆ ಒಬ್ಬರಿಗೊಬ್ಬರಿಗೆ ಬರುವ ಹೊತ್ತಿಗೆ ಆದ ಸಂಗತಿಯು ಇಲಿಯು ಓಡಿತೆಂದಿದ್ದರೂ ಸಹ ಹುಲಿಯು ಓಡಿತೆಂಬ ಸುದ್ದಿಯು ಹರಡಿಬಿಡುತ್ತದೆ. ಅದರಲ್ಲೂ ಶಿಷ್ಯರಿದ್ದರೂ ಮತ್ತಷ್ಟು ಮೆರಗುಗೊಟ್ಟು ಹೇಳಿ ತಮ್ಮ ಫಾಯದೆಯನ್ನು ಮಾಡಿಕೊಳ್ಳುತ್ತಾರೆ. ಅದು ಸುಳ್ಳೋ ನಿಜವೋ ಎನ್ನುವದನ್ನು ವಿಚಾರಮಾಡಿ ನೋಡುವ ಜನರು ಸಿಗುವದು ಕಠಿಣ. ಅಂತೂ ಇದೇ ರೀತಿಯಲ್ಲಿ ಸಾಧುವಿನ ಪ್ರಚಾರ ಆಗಿ ಊರಲ್ಲೆಲ್ಲಾ ಅವನ್ನು ಮಹಾತ್ಮನೆಂದು ಅವನ ದರ್ಶನಕ್ಕಾಗಿ ಹೋಗಹತ್ತಿದರು. ಆದರೆ ಅವನು ಮೈಸೂರಿನಲ್ಲಿ ಒಂದು ಕಚೇರಿಯಲ್ಲಿ ಕಾರಕೂನನಿದ್ದು, ಸರಕಾರೀ ಹಣ ಅಪಹರಿಸಿದ್ದನು. ಅಲ್ಲಿ ಕಳುವಿನ ಆರೋಪ ಬಂದದ್ದರಿಂದ ಮತ್ತು ಅವನನ್ನು ಹಿಡಿಯಲು ವಾರಂಟು ಹೊರಟಿದ್ದರಿಂದ ಅಲ್ಲಿಂದ ಫರಾರಿಯಾಗಿ ವೇಷ ಬದಲಿಸಿಕೊಂಡು ಊರೂರು ತಿರುಗುತ್ತಿದ್ದುದರಿಂದ ಸರಕಾರದವರು ಅವನ ತಪಾಸಣೆಯಲ್ಲಿದ್ದು ಅವನು ಇಲ್ಲಿರುವದನ್ನು ಗುರುತಿಸಿದರು, ಮತ್ತು ಸಾಧುವೆಂದು ಕ್ಯಾವಿ ಬಟ್ಟೆ ಧರಿಸಿ ಮೋಟಾರಿನಲ್ಲಿ ಮೆರೆಯುತ್ತಿದ್ದಾಗ ವಾರಂಟು ತೋರಿಸಿ ಸೆರೆಹಿಡಿದಾಗ ಗಾಬರಿಯಾದನು.

ಅವನ ವೇಷವೆಲ್ಲವೂ ಮಾಯವಾಗಿ ಹೋಯಿತು. ಶಿಷ್ಯರೆಲ್ಲರೂ ಆಶ್ಚರ್ಯಚಕಿತರಾಗಿ ಅವನ ಗೊಡವೆಬಿಟ್ಟರು. ಒಟ್ಟಿನ ಮೇಲೆ ಸಾರಾಂಶ ವೇನೆಂದರೆ, ಸ್ಥಳಾಂತರ ಹಾಗು ವೇಷಾಂತರ ಮಾಡುವಷ್ಟು ಜಾಣತನ ವಿದ್ದಲ್ಲಿ ಕೃತ್ರಿಮ ನಿಯಮಗಳ ಭಂಗ ಮಾಡಿಯೂ ಸರಳ ಮನುಷ್ಯನು ಘನತೆಗೇರಿ ಸುಖ ಪಡೆಯಬಹುದು. ಇಂತಹದೇನೂ ತಪ್ಪುಮಾಡದೆ ಸಹ ಕೇವಲ ದೇವರ ಪ್ರೇರಣೆಯಂತೆ ನಡೆದಂಥ ಸ್ತ್ರೀಯರಿಗೆ ಶಿಕ್ಷೆ ಅನುಭವಿಸುವ ಪ್ರಸಂಗಗಳು ಬರುತ್ತವೆ. ( )ಯಾವದೇ ಒಂದು ಕಾರ್ಯ (ಒಳ್ಳೆಯದೇ ಆಗಲಿ ಕೆಟ್ಟದ್ದೇ ಆಗಲಿ) ಆಗಬೇಕಾದರೆ ಸ್ಥಳಾಂತರ ಮಾಡಬೇಕಾಗುತ್ತದೆ. ಹೆಣ್ಣುಮಕ್ಕಳಿಗೆ ಇಂಥ ಪ್ರಸಂಗಗಳು ಬಹಳ ಬರುತ್ತಿರುತ್ತವೆ. ಉದಾಹರಣೆಗೆಂದರೆ, ಒಮ್ಮೆ ಶ್ರೀ. ಸ. ಇವರು ಬ. ಯಿಂದ ಬಂದ ಹುಡುಗಿಯನ್ನು ಆ ಸ್ಥಳದಿಂದ ಬೇರೆ ಕಡೆಗೆ ಇಟ್ಟರೆ ಅವಳ ಕಲ್ಯಾಣವಾಗುವದೆಂಬ ಉದ್ದೇಶದಿಂದ ಅವಳನ್ನು ಸಂಘಕ್ಕೆ ತಂದು ಸೇರಿಸಿದರು.

ಜ—೧—೪೮:— ಆ ಹುಡುಗಿಯು ಸಣ್ಣವಳಿದ್ದುದರಿಂದ ಅವಳ ಅಕ್ಕನೇ ಅವಳನ್ನು ಕೆಟ್ಟರೀತಿಯಲ್ಲಿ ಉಪಯೋಗ ಮಾಡಿಕೊಳ್ಳುತ್ತಿರುವ ಳೆಂದು ಅಲ್ಲಿತಂದಿಟ್ಟರು. ಆ ಹುಡುಗಿಯಾದರೂ ಒಳ್ಳೇ ರೀತಿಯಿಂದ ನಂಬಿ ಗೆಯಿಂದ ನಡೆದುಕೊಳ್ಳುತ್ತಿದ್ದಳು. ಇವಳೊಬ್ಬಳನ್ನೇ ಬಿಟ್ಟಿರುವದು ಯೋಗ್ಯವಲ್ಲವೆಂದು ಮಾ. ಮಾ. ಇವರು ತಮ್ಮ ಮನೆಗೆ ಕರೆದುಕೊಂಡು ಹೋದರು. ಒಮ್ಮೆ ಅವರಕ್ಕನು ಬಂದಾಗ ಅವಳು ಮಾ. ಇವರ ಬೆನ್ನಿಗೆ ಬಿದ್ದು ಅವಳೊಡನೆ ತನ್ನನ್ನು ಕಳುಹಿಸಬಾರದೆಂದು ಕೇಳಿಕೊಂಡಳು. ಆ ಹುಡುಗಿಯನ್ನು ಹೈಸ್ಕೂಲಿಗೆ ಸೇರಿಸಲಾಯಿತು. ಅಲ್ಲಾದರೂ ಅವಳು ಒಳ್ಳೇ ವಿನಯದಿಂದ ನಡೆಯುತ್ತಿದ್ದುದರಿಂದ ಎಲ್ಲರಿಗೂ ಮೆಚ್ಚುಗೆಯಾಗಿದ್ದಳು. ಜನರು ಅವಿವಾಹಿತರಾದ ತೀ. ದಾ. ಇವರೊಡನೆ ಆ ಹುಡುಗಿಯ ಲಗ್ನವಾಗು ವದೆಂದು ಅನ್ನುತ್ತಿದ್ದರು. ಒಮ್ಮೆ ಮಾ. ಇವರು ವರ್ಗಣಿಗೆ ಹೋಗಿ ಮನೆಗೆ ಬರುವ ವೇಳೆಗೆ ಸರಿಯಾಗಿ ಆ ಹುಡುಗಿಯು ಒಂದು ಫೋಟೋ ಇಟ್ಟು ಕೊಂಡು ಧ್ಯಾನ ಮಾಡುತ್ತಿರುವದು ಕಾಣಿಸಿ ಇವರು ಅದು ಏನೆಂದು ಕೇಳ

ಲು ಅವಳು ಏನೂ ಇಲ್ಲವೆಂದಳು. ಮಾ. ಇವರಿಗೆ ಅಂದಿನಿಂದಲೂ ಅ
ಮೇಲೆ ಸ್ವಲ್ಪ ಅನುಮಾನವುಂಟಾಗಿ ಸಂಶಯ ದೃಷ್ಟಿಯಿಂದ ನೋಡ
ದರು. ಇದರಿಂದ ಅವಳ ಮನಸ್ಸಾದರೂ ಬೇರೆಯಾಗಹತ್ತಿತ್ತು.
ಅವಳ ಪ್ರಿಯಕರನು ಸಮಾಜಕ್ಕೆ ಬಂದು ಅವಳನ್ನು ಬಿಡಲು
ಕೊಂಡನು. ಸಮಾಜದವರು ಬಿಡಲಿಲ್ಲ. ಅವನಿಗೆ ಕಾಯದೆಯಿಂದ ಏ
ಮಾಡಲು ಬಾರದಂತಿದ್ದುದರಿಂದ ಸುಮ್ಮನೆ ಹಿಂತಿರುಗಬೇಕಾಯಿತು. ಅ
ತೀ. ದಾ. ಇವರ ತಮ್ಮಂದಿರ ಬಳಿಗೆ ಹೋಗಿ ಹುಡುಗಿಯನ್ನು ಬಿಡಿ
ಹೇಳಲು ಅವರು ಇಲ್ಲೆನ್ನಲು ಇಬ್ಬರಿಗೂ ಜಗಳ ಬಡಿದಾಟಗಳಾದ
ಇವರು ಅವನ ಮೇಲೆ ಕೋರ್ಟಿನಲ್ಲಿ ಕಟ್ಲೆ ಹಾಕಿದರು. ಅವರ ತಂದೆ
ಸುಪ್ರಸಿದ್ಧ ವಕೀಲರು; ಇವರ ತಮ್ಮಂದಿರು ಆ ವಕೀಲರ ಮುಂದೆ ಮ
ವಿಷಯ ಹೇಳಲು ಅವರು ಮಗನ ಮೇಲೆ ಇಲಾಜ ನಡಿಸಲು ಸ
ಕೊಟ್ಟು ಒಳಗಿಂದೊಳಗೆ ಬೇರೆ ವ್ಯವಹಾರ ರಚಿಸಿದ್ದರಿಂದ ಆ ಕಟ್ಲೆ
ಉಪಯೋಗವೇನಾಗಲಿಲ್ಲ. ಇಷ್ಟರಲ್ಲೇ ಆ ಹುಡುಗಿಯ ಮನಸ್ಸಾ
ಪೂರ್ಣ ಬದಲಾವಣೆಹೊಂದಿತು. ಮುಂದೆ ಆ ಹುಡುಗನು ಅವಳಕ್ಕನ
ತಂಗಿಯನ್ನು ಕರೆತರಲು ಕಳುಹಿದನು. ಈ ಸಾರೆ ಅಕ್ಕನು ಬಂದೊ
ಆತ್ತುಕರೆದು ಅವಳೊಳನೆ ಹೋಗಲು ತಯಾರಾದಳು. ಅವಳ ಬಂದ
ಒಡವೆಗಳು ಸಂಸ್ಥೆಯವರಕಡೆ ಇದ್ದವು. ಅವಳಿಗೆ ಇಷ್ಟು ದಿನಗಳ ವರೆ
ಖರ್ಚನ್ನು ಕೊಟ್ಟು ಒಡವೆಗಳನ್ನು ತೆಗೆದುಕೊಂಡು ಹೋಗಬಹುದೆ
ಸಮಾಜದವರು ತಿಳಿಸಲು ಅವಳು ಎಲ್ಲಿಯ ಖರ್ಚೆಂದು ಜಗಳಾಡ
ದಳು. ಈ ರಗಳೆಯನ್ನು ಕೇಳಿ ಇವರ ನೆರೆಮನೆಯಲ್ಲಿದ್ದ ವಕೀಲರೊ
ನಡುವೆ ಬಂದು ಅವರ ಒಡವೆಗಳನ್ನು ಅವರಿಗೆ ಕೊಟ್ಟುಬಿಡಿ ಅವರೊ
ಮಾತಾಡುವದರಿಂದ ಸಂಸ್ಥೆಯ ಕಿಮ್ಮತ್ತು ಕಡಿಮೆಯಾಗುತ್ತದೆ
ಹೇಳಿದರು. ಅದರಂತೆ ಅವಳಿಗೆ ಒಡವೆಗಳನ್ನು ಕೊಟ್ಟು ಕಳ
ಲಾಯಿತು. ಮುಂದೆ ಮೊ. ಊರಿನಿಂದ ಒಬ್ಬ ತಾಯಿ ಮೂರು ಮ
ಸಂಘಕ್ಕೆ ಬಂದು ಸೇರಿದರು.

೬—೧—೪೮:— ಅವರು ಇಲ್ಲಿರುವಾಗ ಹುಡುಗಿಯರು ಹೈಸ್ಕೂಲಿಗೆ ಹೋಗುತ್ತಿದ್ದರು. ನಾವು ಮೊದಲು ಯಾರ ಸ್ವಭಾವವನ್ನೂ ತಿಳಿದುಕೊಳ್ಳುವದಿಲ್ಲ. ಮಾ. ಮಾ. ಇವರಾದರೂ ತಿಳಿದುಕೊಂಡಿಲ್ಲ ಮಾನಸಶಾಸ್ತ್ರಜ್ಞರು ದಿನದಿನವೂ ಪರಿಚಯವಾದಂತೆ ಸ್ವಭಾವದ (ತೋರಿಕೆಯ) ಹಿನ್ನೆಲೆಯಲ್ಲಿ ಏನಿದೆ ಎನ್ನುವದನ್ನು ತಿಳಿದುಕೊಳ್ಳಬೇಕು ಎಂದು ಹೇಳುತ್ತಾರೆ. ಎಷ್ಟೋ ಜನರ ಉದಾಹರಣೆಗಳೆಂದರೆ ಮಾಸ್ತರ ಮಾಸ್ತರಿಣಿಯರು ಶಾಲೆಯಲ್ಲಿ ಹುಡುಗರ ಮೇಲೆ ಸುಮ್ಮಸುಮ್ಮನೆ ಹರಿಹಾಯುತ್ತಿರುತ್ತಾರೆ. ತಮ್ಮ ಮನೆಯಲ್ಲಿ ಆದ ಜಗಳದಿಂದ ತಲೆಕೆಟ್ಟು ಅಲ್ಲಿ ಅದನ್ನೂ ತೂರಹಾಕಲು ಬಾರದಾದೊಡನೆ ಮಂದಿಯ ಮೇಲೆ ಅದರ ಸೇಡು ತಿರಿಸಿಕೊಳ್ಳುತ್ತಿರುತ್ತಾರೆ. ದೊಡ್ಡದೊಡ್ಡ ಹುದ್ದೆದಾರರು ತಮ್ಮ ಕೈಕೆಳಗಿನವರ ಮೇಲೆ ಆ ನೌಕರರು ತಮ್ಮ ಕೈಕೆಳಗಿನ ಆಳುಮಕ್ಕಳ ಮೇಲೆ ಹೀಗೆ ನಡೆದೇ ಇರುತ್ತದೆ. ಕೆಲವರು ತಮಗಾದ ದುಃಖವನ್ನು ಕಣ್ಣೀರಿನಿಂದ ಹೊರಗೆ ಹಾಕಿ ಸಮಾಧಾನ ತಾಳುತ್ತಾರೆ. ಮತ್ತೆ ಕೆಲವರು ಒದರಾಟದ ಮೂಲಕ ಹೊರಗೆ ಹಾಕಿ ಸಮಾಧಾನ ತಾಳುತ್ತಾರೆ ಕಣ್ಣೀರು ಸುರಿಸುವವರನ್ನು ನೋಡಿದರೆ ಜನರು ಡೋಕಾರಿ ಎನ್ನುತ್ತಾರೆ. ಹಾಗೆ ಅನ್ನುವವರ ಉದ್ದೇಶವು ಕೆಟ್ಟದ್ದೇ ಇರುವದೆಂದು ಹೇಳಲು ಸಾಧ್ಯವಿಲ್ಲ. ಆದರೆ ಅದು ಒಬ್ಬೊಬ್ಬರ ಸ್ವಭಾವ. ಅನ್ನುವವರ ಉದ್ದೇಶವು ಒಳ್ಳೇಯದಿದ್ದರೂ ಸಹ ವಾಕ್ಯದಲ್ಲಿ ಹೆಚ್ಚು ಕಡಿಮೆಯಾದೊಡನೆ ಜನರ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವಾಗಿ ಆದರಿಂದ ಘಾತವಾಗುವ ಸಂಭವವಿರುತ್ತದೆ. ಇದಕ್ಕೊಂದು ಉದಾಹರಣೆಯೆಂದರೆ ಒಮ್ಮೆ ಮಾ. ಮಾ. ಇವರು ಶ್ರೀ. ಮ. ಇವರಿಗೆ ಫಂಡಿಗೆ ಹೋದಾಗ ಯಾವದೋ ವಿಷಯದ ಸಲುವಾಗಿ ಒದರಾಡಲು ಮ. ಇವರು ಕಣ್ಣೀರು ಹಾಕಿದರು. ಆಗ ಮಾ. ಇವರು ಅವರಿಗೆ ಡೋಕಾರಿ ಎಂದು ಹೇಳಿದರು. ಹೀಗೆ ೨೪ ತಾಸೂ ಕೂಡಿ ಇದ್ದು ಸ್ವಭಾವವನ್ನು ಅರಿತವರೂ ಸಹ ಒಂದೊಂದು ವೇಳೆ ತಮ್ಮ ತಾಪದಲ್ಲಿ ಹೀಗೆನ್ನುವ ಪ್ರಸಂಗವಿರುತ್ತದೆ. ನಿಜವಾದ ಪರಿಸ್ಥಿತಿ ನೋಡಿದರೆ ಹೊಡೆದಾಡುವವರೂ ಸಹ ಒಬ್ಬರಿಗೊಬ್ಬರು ಬೆರೆತುಹೋಗಿ ತಪ್ಪು ತಿದ್ದಿಕೊಳ್ಳಬಹುದು. ಇದರಿಂದ ಪ್ರತಿಯೊಬ್ಬರೂ ಸ್ವಭಾವತಃ ಕೆಟ್ಟವರಿಂದೆ ಕೆಲವು ಪ್ರಸಂಗಗಳ ಮೂಲಕ ಕೆಡುಕು ಸ್ವಭಾವದವರಾಗುತ್ತಾರೆ.

೭—೧—೪೮ ಮನುಷ್ಯನು ಯಾವ ಗುರಿ ಇಡುತ್ತಾನೋ ಅದಕ್ಕೆ ತಕ್ಕಂತೆ ವಿಚಾರ ಮಾಡುತ್ತಾನೆ. ಆದರೆ ಯಾವನು ಹೊಣೆ ಹೊರುತ್ತಾನೋ ಅವನಿಗೆ ಆ ಕೆಲಸದ ಜವಾಬ್ದಾರಿ ಜಾಸ್ತಿಯಾಗಿರುವದರಿಂದ ಕಾರ್ಯದಲ್ಲಿ ಬಂದ ಎಡರುತೊಡರುಗಳನ್ನು ಎದುರಿಸಲು ಅವನು ಪ್ರಯತ್ನಿಸುತ್ತಾನೆ. ಇ ನ್ನು ಬೇರೆ ಜನರ ಸ್ವಭಾವವೆಂದರೆ ಆ ಕೆಲಸದಿಂದ ಫಾಯದೆ ಸಿಗುವಂತಿದ್ದರೆ ತತ್ವದ ಮುಸುಕಿನಲ್ಲಿ ತೆಗೆದುಕೊಂಡು ಅದೂ ಇಲ್ಲದಿದ್ದರೆ ಅದರ ಸಲುವಾಗಿ ತಿರಸ್ಕಾರ ತಾಳುವದು. ಕೇವಲ ತತ್ವವೆಂದರೆ ಸಾಲದು. ಕೇವಲ ವ್ಯವ ಹಾರವೆಂದರೆ ಸಾಲದು. ಒಮ್ಮೊಮ್ಮೆ ತತ್ವದ ಕಡೆಗೆ ಒಮ್ಮೊಮ್ಮೆ ವ್ಯವಹಾರ ದ ಕಡೆಗೆ ನೋಡಿ ಕೆಲಸಗಾರರು ಕೆಲಸ ಮಾಡಬೇಕಾಗುತ್ತದೆ. ಮಾ. ಇವರು ಹೆಚ್ಚಾಗಿ ವ್ಯಾವಹಾರಿಕರು. ತೀ. ದಾ. ಇವರು ಗೊಡ್ಡು ತಾತ್ವಿಕರು. ತೀ. ದಾ. ಇವರ ತಮ್ಮಂದಿರ ಭಾರವನ್ನು ಸಹ ಇವರೇ ಹೊರ ಬೇಕಾದ ಪ್ರಸಂಗವಿದ್ದುದರಿಂದ ಅವರು ಮಾ. ಇವರ ರೊಕ್ಕದಿಂದಲೆ ತಮ್ಮ ತಮ್ಮಂದಿರ ಮನೆಯ ಅಡಚಣಿ ನೀಗಿಸುತ್ತಿದ್ದರು. ಆದರೆ ಈ ಎಲ್ಲ ರೊಕ್ಕದ ಹೊಣೆಯ ಭಾರವನ್ನು ಮಾ. ಇವರಿಂದ ತಡೆದುಕೊಳ್ಳಲು ಹೇಗೆ ಸಾಧ್ಯ! ಮಾ. ಇವರ ಮತ್ತು ತೀ. ದಾ. ಇವರ ವಿಚಾರಗಳಲ್ಲಿ ಎಷ್ಟೋ ಭಿನ್ನಾಭಿಪ್ರಾಯಗಳಿವೆ. ವ್ಯವಹಾರತಃ ಮಾ. ಇವರ ಮಾತು ಸರಿಯಾಗಿರು ವದು ಆದರೆ ತೀ. ದಾ. ಇವರದು ತಾತ್ವಿಕವಿದ್ದು, ರಮ್ಯವಿದ್ದು ಜನರಿ ಗೇನಾದರೂ ಉಪಯೋಗ ಬೀಳುವಂಥಹದಿರಬೇಕೆಂದು ಅವರ ಮತ್ತು ಮಾ. ಇವರಿಗೆ ತಾತ್ವಿಕ ವಿಚಾರದಲ್ಲಿ ಅಷ್ಟೊಂದು ನಂಬಿಗೆ ಇಲ್ಲ. ಅದರಲ್ಲೂ ಚಿಕ್ಕಂದಿನಿಂದ ಅವರಿಗೆ ರೊಕ್ಕದ ಸಲವಾಗಿ ಜನರ ಕಾಟವು ಬಹಳಾಗಿದ್ದುದ ರಿಂದ ಅವರಿಗೆ ಜನರ ಸ್ವಭಾವದಲ್ಲಿ ನಂಬಿಕೆ ಉಳಿಯದಾಯಿತು. ಹೀಗಿರು ವಾಗ ಮೊ..... ಯಿಂದ ಬಂದ ( ನಾಲ್ಕು ಜನರ ) ಆ ಹೆಂಗಸಿನ ಅಣ್ಣನ ಮಗನು ದೊಡ್ಡ ದೊಡ್ಡ ತತ್ವವನ್ನು ಹೇಳುತ್ತ ಬೋರ್ಡಿಂಗಿನಲ್ಲಿ ಆರೋಗ್ಯ ಉಳಿಯಲು ಒಳ್ಳೆ ಆಹಾರ ಬೇಕೆನ್ನತೊಡಗಿದರು. ಆರೋಗ್ಯಕ್ಕೆ ಬೇಳೆ, ಬೆಲ್ಲ, ಹಾಲು, ಮೊಸರು ಬೇಕೆಂದು ಆ ವಿದ್ಯಾರ್ಥಿ ನಿಯರ ಅಣ್ಣನು ಸಾಧಿಸಹತ್ತಿದನು. ರೊಕ್ಕಕ್ಕೇನು ಕಡಿಮೆ ನನ್ನ ಪರಿ ಚಯವು ಆ ಮಹಾರಾಜನಿಗುಂಟು, ಆ ನ್ಯಾಯಾಧೀಶನು ಹೀಗೆ ವಚ

ನಿತ್ತಿರುವವನು, ಮುಂತಾದ ದೊಡ್ಡ ದೊಡ್ಡ ಮುಂಡಿಗೆಗಳನ್ನುರುಳಿಸ ಹತ್ತಿದನು. ರೊಕ್ಕದ್ದಿಲ್ಲ ಭಾರವು ಮಾ ವಾ. .ಇವರ ಮೇಲಿದ್ದುದರಿಂದ ಮತ್ತು ಮೇಲ್ವರ್ಣದ ವಿಲಾಸಿ ಜೀವನಕ್ಕೆ ಜನರು ಸಹಾಯ ಮಾಡುವದು ಶಕ್ಯವಿಲ್ಲ. ಮೇಲಾಗಿ ಸಮಾಜದಲ್ಲಿ ಕೆಲಸಗಾರರಿಲ್ಲ, ಇಂಥ ಪರಿಸ್ಥಿತಿಯಲ್ಲಿ ತಾತ್ವಿಕರಾದ ಶೀ. ದಾ. ಇವರೇನು ಹೇಳಬಲ್ಲರು? ಸ್ವಾರ್ಥಸಾಧಕರಾದ ದೊಡ್ಡ ದೊಡ್ಡ ಸಂಸ್ಥೆಗಳಲ್ಲಿಯ ಉಂಡಾಡಿಗರನ್ನು ನೋಡಿ ಮೊ. ಲ್ಮರುವಿಸವರೇನು ಹೇಳಬಲ್ಲರು? ಪಾಶಿಸಿಂದ ರೊಕ್ಕ ಸುರಿಸಿದರೆ ಹೊಟ್ಟೆ ತುಂಬ ಬಲ್ಲದೇ; ಕೊನೆಗೆ ವ್ಯಾಜ್ಯಗಳು ನಡೆದು ತಾವಾರು ಏತಕ್ಕೆ ಇಲ್ಲಿಗೆ ಬಂದಿದ್ದೇವೆ, ನಾಲ್ಕುಜನರ ಹೊಟ್ಟೆ, ಬಟ್ಟೆ, ಪುಸ್ತಕ, ಫೀ ಮುಂತಾದುದಕ್ಕೆ ವೆಚ್ಚ ಮಾಡುತ್ತಾರೆಂಬ ವಿಚಾರವು ಸಹ ಅವರಿಗೆ ಬರದಂತಾಗಿದ್ದ ಸಂಗತಿ ಆಶ್ಚರ್ಯಕರವಲ್ಲವೇ!

೮-೧-೪೮:— ಚಕ್ಕಾ ಬಿದ್ದೊಡನೆ ಪಗಡೆಯಾಟವು ಘಟ್ಟಿಯಾಗುತ್ತದೆಂದು ಹೇಗೆ ಅನ್ನುತ್ತಾರೆ ಹಾಗೆ ಬೋರ್ಡಿಂಗಿನವರ ಆರೋಗ್ಯನಿಯಮದ ಸಲುವಾಗಿ ಚರ್ಚೆ ನಡೆಯಿತು. ಮಾ. ಇವರು ಇದಕ್ಕೆ ಸೊಪ್ಪು ಹಾಕದಾದರು. ಶೀ. ದಾ. ಇವರು ಇದನ್ನು ಮಾ. ಇವರ ಮುಂದೆ ಹೇಳಿದರೆ ಅವರು "ನೀನೇ ತಂದುಹಾಕು, ಎನ್ನಹತ್ತಿದರು" ಬೋರ್ಡಿಂಗಿನಲ್ಲಿ ತಾಯಿ ಮತ್ತು ಮೂರು ಮಕ್ಕಳುಗಳು ಮಾತ್ರ ಇದ್ದುದರಿಂದ ತಾಯಿಯೇ ಎಲ್ಲ ಕೆಲಸವನ್ನು ತಕರಾರಿಲ್ಲದೆ ನಿರ್ವಹಿಸಿಕೊಂಡು ಹೋಗುತ್ತಿದ್ದಳು. ತಾಯಿಯಾದವಳು ಗರ್ಭಿಣಿ ಇರುವಳೆನ್ನುವದು ತಿಳಿದೊಡನೆ ಮಾ. ಇವರು ಅವಳನ್ನು ಕೇಳಲು ಅವಳು ಅದು ಇನ್ನೂ ಸರಿಯಾಗಿ ಗೊತ್ತಿಲ್ಲವೆಂದಳು. ಆದರೆ ಮಾ. ಇವರು ಇಲ್ಲಿ ಬಾಣಂತಿತನ ಮಾಡುವವರಿಲ್ಲದ್ದುದರಿಂದ ಊರಿಗೆ ಹೋಗೆನ್ನಲು ಅವಳಾದರೂ ಹೊರಟುಹೋದಳು.

ಈ ಒಂದು ಸಣ್ಣ ಮಾತಿನಸಲುವಾಗಿ ತಾನು ಮುಂದೆ ಯಾವ ಕಷ್ಟಕ್ಕೆ ಗುರಿಯಾಗುವೆನೆಂಬ ತಿಳುವಳಿಕೆ ಇಲ್ಲದೆ, ತನ್ನ ಹುಡುಗರ ಮುಂದಿನ ಮಾರ್ಗದ ಕಲ್ಪನೆ ಇಲ್ಲದೆ ಸಮಾಜವನ್ನು ಬಿಟ್ಟು ಹೊರಟು ಹೋದಳು.

ಆದರೆ ಸುದ್ದಿಗಾರರು ಲೋಕಮತದಲ್ಲಿ ಬೇರೆ ಬೇರೆ ವಿಷಯುಗಳನ್ನು ಸ್ವಲ್ಪದರಲ್ಲಿಯೇ ಸುಂದರವಾದ ವರ್ಣನೆಮಾಡಿ ಮತ್ತೆ ಕ್ಯಾಸಗೋಡಿನಲ್ಲಾದ ಕರ್ನಾಟಕದ ಏಕೀಕರಣದ ವರ್ಣನೆ ಮಾಡಿದ್ದಾರೆ. ಮತ್ತು ಅಲ್ಲಿ ಆದ ಒಂದು ಹೆಣ್ಣುಮಕ್ಕಳ ಮಹಿಲಾಗೋಷ್ಠಿ ಸಲುವಾಗಿ ವರ್ಣನೆ ಮಾಡಿದ್ದಾರೆ. ಅದರಲ್ಲಿ ಅಲ್ಲಿಗೆ ಬಂದ ಹೆಣ್ಣುಮಕ್ಕಳು ಅಪ್ಸರ ಸ್ತ್ರೀಯರಂಗೂ ಮಿಗಿಲಾಗಿದ್ದಾರೆಂದು ಹೇಳಿದ್ದಾರೆ. ಆದರೆ ಮುಂದೆ ಆ ಸಭೆಯಲ್ಲಿ ಯಾವ ಚರ್ಚೆ, ಏನು ನಿರ್ಣಯವಾಯಿತೆನ್ನುವದು ಹೇಳಿಲ್ಲ. ಇದರಿಂದ ಕಂಡು ಬರುವದೇನೆಂದರೆ ಹೆಣ್ಣುಮಕ್ಕಳ ಅಜ್ಞಾನ ಮತ್ತು ಅವರ ಡೌಲು ಇದರಿಂದ ತಿಳಿದು ಬರುವದೇನೆಂದರೆ ಈ ಹೆಂಗಸರು ಕೇವಲ ಶೃಂಗಾರದಲ್ಲೇ (ಜನರ ತೋರಿಕೆಗಾಗಿ) ಕಾಲಕಳೆಯುತ್ತಾರೆ. ಅವರಿಗೆ ವಿಷಯದ ಅರಿವಿಲ್ಲ. ಹೆಣ್ಣುಮಕ್ಕಳಲ್ಲಿ ಒಕ್ಕಟ್ಟಿರುವದಿಲ್ಲ. ಯಾವಾಗಲೂ ಬಡಿದಾಡುತ್ತಿರುತ್ತಾರೆ. ಇದರಂತೆ ತಮ್ಮ ಒಳ್ಳೆಯದು ಕೆಟ್ಟದರ ಕಲ್ಪನೆ ಸಹ ಅವರಿಗೆ ಇರುವದಿಲ್ಲ. ನೊ. ಲ್ಮರುವಿನ ಹೆಣ್ಣುಮಗಳು ಮುಂದೆ ಸಂಸ್ಥೆಯನ್ನು ಬಿಟ್ಟು ಹೋದಮೇಲೆ ಅವರ ಪರಿಸ್ಥಿತಿ ಬಹಳ ಕೆಟ್ಟಿತೆಂದು ಹೇಳುತ್ತಾರೆ. ಆದರೆ ಅವರು ತಿರುಗಿ ಸಂಸ್ಥೆಗೆ ಬರಲಿಲ್ಲ. ಇದರ ಮೇಲಿಂದ ಹೆಣ್ಣುಮಕ್ಕಳ ಹಿತವೇ ಹೆಣ್ಣುಮಕ್ಕಳಿಗೆ ತಿಳಿಯುವದಿಲ್ಲವೆಂದು ಧಾರಾಳವಾಗಿ ಹೇಳಬಹುದು. ವಿದ್ಯೆ ಸ್ವಾಭಿಮಾನ ಸ್ವಾವಲಂಬನ ಹೆಚ್ಚೋ ಸ್ವಾತಂತ್ರ ಸುಖಲೋಲುಪತೆ ಹೆಚ್ಚೋ ಇದು ಅವರಿಗೆ ತಿಳಿದದಿನವೇ ಸುದಿನವೆಂದು ಹೇಳಬಹುದು.

೯-೧-೪೮:— ವಿ. ರದ ಕಡೆಗೆ ತೀ. ದಾ. ಇವರು ವರ್ಗಣಿಗೆ ಹೋದ ಸಮಯದಲ್ಲಿ ಹಿಂದೆ ಮೊದಲಿನ ಸಂಸ್ಥೆಯಲ್ಲಿ ಯಾವ ಹುಡುಗಿಯ ಸಲುವಾಗಿ ಗೊಂದಲವೆದ್ದಿತೋ ಅವಳು ಅಲ್ಲಿ ಮಾಸ್ತರಿಣಿಯಾಗಿ ಕೆಲಸ ಮಾಡುತ್ತಿದ್ದಳು. ಮೊದಲು ಜಗಳಾಡಿದವನೆರೊಡನೆ ಸಹ ನಾವು ಸಹಕಾರ ಬುದ್ಧಿಯಿಂದ ಮಾತನಾಡಿದರೆ ಅವರಾದರೂ ತಮ್ಮ ಅಜ್ಞಾನದ ಮೂಲಕ ಆದ ತಪ್ಪನ್ನೊಪ್ಪಿಕೊಳ್ಳುತ್ತಾರೆ. ಇಲ್ಲವೆ ತಪ್ಪಿಗಾಗಿ ನಾಚುತ್ತಾರೆ. ಅಥವಾ ಪಶ್ಚಾತ್ತಾಪ ಪಡುತ್ತಾರೆ. ನಾವು ಅಹಂಕಾರ ತಾಳಿದರೆ ಅವರಿಗೂ ಅಹಂಕಾರ ಬಂದು ಅವರು ಸಹಕರಿಸುವ

ದಿಲ್ಲ. ಈ ತತ್ವವನ್ನರಿತ ತೀ. ದಾ. ಇವರಾದರೂ ಯಾರೊಡನೆಯೂ ದ್ವೇಷ ಮಾಡದೆ ಅವರೆಲ್ಲರೊಡನೆ ಸಹಕಾರದಿಂದ ಹೋಗುವ ಸ್ವಭಾವದವ ರಾಗಿರುವರು. ಅವರು ಆ ಮಾಸ್ತರಿಣಿಯೊಡನೆ ಹಿಂದಿನದನ್ನು ಮರೆತು ಮಾತನಾಡಿಸಲು ಸ್ವತಃ ತಾವೇ ಹೋಗಿ ಬಂದದ್ದರಿಂದ ಮೊದಲು ಅವಳು ಸಿಟ್ಟಿನಿಂದ ಮಾತನಾಡಿದರೂ ಸಹ ಮುಂದೆ ಸರಿಯಾಗಿ ಮಾತನಾಡಹತ್ತಿ ದಳು. ಮತ್ತು ಸಂಸ್ಥೆಯ ವಾರ್ಷಿಕೋತ್ಸವಕ್ಕೆ ತನ್ನನ್ನೇಕೆ ಕರೆಕಳುಹಲಿಲ್ಲ ವೆಂದು ಸಿಟ್ಟಿಗೆದ್ದಳು. ಮುಂದಾದರೂ ತನ್ನನ್ನು ಕರೆಸಿಕೊಳ್ಳಬೇಕೆಂದು ಬೇಡಿಕೊಂಡಳು. ಸಾಮಾನ್ಯ ವ್ಯವಹಾರಗಳಲ್ಲಿ ವೈಯಕ್ತಿಕ ಸಹಾಯ ವನ್ನು ಅತಿಯಾಗಿ ಅಪೇಕ್ಷಿಸುವರು. ಅತಿ ಸಹಾಯಮಾಡುವವರ ವರ್ಚಸ್ಸು ಬೀಳುವದು. ಇಲ್ಲವೆ ದ್ವೇಷವುಂಟಾಗುವದು. ಸಾರ್ವಜನಿಕ ವ್ಯಕ್ತಿಯಿಂದ ಅಷ್ಟು ವೈಯುಕ್ತಿಕ ಸಹಾಯವಾಗಲಾರದು. ಇದರಿಂದ ಹತ್ತಿರವಾದವರು ಸಹ ವೈರಿಯಾಗುತ್ತಾರೆ. ಸಾರ್ವಜನಿಕ ನಿಯಮದಂತೆ ನಡೆದರೆ ಅಲ್ಲಿಂದ ಸ್ವಲ್ಪವಾದರೂ ಸಹಾಯ ಸಿಗುವದು.

ಉದಾ:-- ನಮ್ಮ ಸಂಸ್ಥೆಗೆ ಯಾರೇ ಬಂದುನಿಂತಲ್ಲಿ ಅವರಿಗೆ ವಿದ್ಯೆ ಕಲಿಸಿ ಅವರನ್ನು ತಮ್ಮ ಕಾಲ ಮೇಲೆ ನಿಲ್ಲುವಂತೆಮಾಡಿ ಅವರಿಂದ ಸಂಸ್ಥೆಗೇನಾದರೂ ಸಹಾಯವಾದರೆ ತೆಗೆದುಕೊಳ್ಳಬಹುದು. ಆದರೆ ಒಬ್ಬ ವ್ಯಕ್ತಿಯನ್ನು ವೈಯಕ್ತಿಕವಾಗಿ ಕೈಯಲ್ಲಿ ತೆಗೆದುಕೊಂಡು ಅವರಿಗೆ ವಿದ್ಯೆ ಕಲಿಸುವದು ಅವರ ಎಲ್ಲ ಕೊರತೆ, ತೊಂದರೆಗಳನ್ನು ಹೋಲಾಡಿಸುವದು ಹೇಗೆ ಸಾಧ್ಯ? ಇದರಿಂದ ಸಂಘದ ಸಹಾಯಕ್ಕಿಂತ ಉತ್ಕಟವಾದ ವೈಯಕ್ತಿಕ ಸಹಾಯವನ್ನು ಕೊಡುವವರು ಬಹಳ. ಸಹಾಯ ಮಾಡುವ ವ್ಯಕ್ತಿಯು ಒಳ್ಳೆಯದಿದ್ದಲ್ಲಿ ಅಷ್ಟು ಲುಕ್ಸಾನವಿಲ್ಲ. ಆದರೆ ಅದರ ವಿರುದ್ಧವಿ ದ್ದಲ್ಲಿ ಸಂಘರೂಪದಿಂದ ಹತ್ತು ಮಂದಿಗೆ ಊಟಕ್ಕೆ ಹಾಕಿ ವಿದ್ಯೆ ಕಲಿಸ ಬಹುದು. ಇದರಿಂದ ಸಂಘಶಕ್ತಿ ಬೆಳೆದು ಸ್ವಾವಲಂಬಿಯಾಗಬಹುದು. ಇಲ್ಲವೆ ಇಡೀ ಆಯುಷ್ಯವೆಲ್ಲ ಹಾಳಾಗುವದು. ಮೇಲಾಗಿ ವ್ಯಕ್ತಿಶಃ ಒಬ್ಬೊಬ್ಬರಿಗೆ ಸಹಾಯ ಮಾಡಬಹುದು. ಆದರೆ ಇದರಿಂದ ಹೆಣ್ಣುಮಕ್ಕಳ ಪ್ರಶ್ನೆ ಬಿಟ್ಟಂತಾಗುವದಿಲ್ಲ. ಮೇಲಾಗಿ ಒಂದೇ ವ್ಯಕ್ತಿಗಾದರೂ ಕೊನೆಯ ವರೆಗೆ

ಸಹಾಯ ಮಾಡುವದು ಶಕ್ಯವಾಗಲಿಕ್ಕಿಲ್ಲ. ವೈಯಕ್ತಿಕ ಸಹಾಯದ ಮೇಲೆ ಎಷ್ಟೋ ಹೆಣ್ಣುಮಕ್ಕಳು ಬಿದ್ದು ಬಸರಾಗುವರು. ಅವಾಗ ಅವರನ್ನು ಬೇರೆ ಕಡೆಗೆ ಬಾಣಂತನಕ್ಕೆ ಕಳಿಸುವದಲ್ಲದೆ ಮಕ್ಕಳನ್ನಗಲಿಸುವರು. ಹೀಗೆ ತಾಯಿ ಮಕ್ಕಳನ್ನಗಲಿಸುವದು ತಪ್ಪು. ಮೊನ್ನೆ ತಾ. ೪-೧-೪೮ ನೇ "ಹರಿಜನ"ದಲ್ಲಿ ಗಾಂಧಿಯವರು ಹೇಳಿರುವದೇನೆಂದರೆ, ಹಿಂದು ಮುಸ್ಲಿಂ ದಂಗೆಯಲ್ಲಿ ಎಷ್ಟೋ ಹಿಂದು ಮಹಿಳೆಯರನ್ನು ಮುಸ್ಲೀಮರು ಹಾಳುಮಾಡಿದ್ದಾರೆ. ಆ ಸಿಟ್ಟಿನ ಮೇಲಿಂದ ಮುಸ್ಲೀಂ ಸ್ತ್ರೀಯರನ್ನು ಹಿಂದೂ ಜನರು ಹಾಳು ಮಾಡುತ್ತಿದ್ದಾರೆ. ಈ ತಾಕಲಾಟದಲ್ಲಿ ಹೆಂಗಸರ ಪರಿಸ್ಥಿತಿಯು ಹೇಳ ಲಾರದಷ್ಟು ಕೀಳಾಗಿದೆ. ಇದನ್ನು ಬಾಯಿಯಲ್ಲಿ ವರ್ಣಿಸುವದಕ್ಕಿಂತ ಪ್ರತಿ ಯೊಬ್ಬ ಹೆಣ್ಣುಮಗಳು ತನ್ನ ಅಜ್ಞಾನದಿಂದಾಗುವ ಈ ಗೋಳನ್ನು ತಪ್ಪಿಸಲು ಪ್ರಯತ್ನಿಸಬೇಕು. ಹಿಂದುಗಳಿಂದ ಕೆಟ್ಟ ಮುಸ್ಲಿಂ ಹೆಣ್ಣುಮಕ್ಕಳನ್ನು ಅವರ ತಮ್ಮೊಳಗೆ ಸೇರಿಸಿಕೊಳ್ಳುತ್ತಾರೆ. ಆದರೆ ಹಿಂದುಗಳಲ್ಲಿ ಈ ಪದ್ಧತಿ ಇಲ್ಲದ ಮೂಲಕ ನಮ್ಮಲ್ಲಿಯ ಜನಸಂಖ್ಯೆಯು ಕಡಿಮೆಯಾಗುತ್ತಿದೆ. ಹಿಂದೂ ಹೆಂಗಸರು ಅನೈಚ್ಛಿಕವಾಗಿ ಕೆಟ್ಟದ್ದರಿಂದ ಅವರನ್ನು ಹೊರಗೆಹಾಕುವದು ಎಷ್ಟು ಅಯೋಗ್ಯವಾದದ್ದು ಮತ್ತು ಆ ಹೆಣ್ಣುಮಕ್ಕಳಲ್ಲಿ ತಪ್ಪಿಲ್ಲದಿದ್ದರೂ ಸಹ ಅವರ ಮೇಲೆ ದೋಷಾರೋಪಣೆ ಮಾಡುವದು ಎಷ್ಟು ಮೂರ್ಖತನ ವೆಂದು ಹೇಳಬೇಕಾಗಿಲ್ಲ. ಮ. ಗಾಂಧಿಯವರು ತಮ್ಮ ಭಾಷಣದಲ್ಲಿ ಇದನ್ನೆ ಹೇಳುತ್ತಾರೆ. ಮತ್ತು ಅದು ಹೆಣ್ಣುಮಕ್ಕಳ ತಪ್ಪಿಲ್ಲದ್ದರಿಂದ ಆ ಹೆಣ್ಣುಮಗ ಳಾದರೂ ತನ್ನ ತಪ್ಪೆಂದು ತಿಳಿಯುವದು ಸರಿಯಲ್ಲ. ಅವರು ಪಶ್ಚಾತ್ತಾಪ ದಿಂದಾಗಲೀ ಅಥವಾ ಯಾವದೇ ರೀತಿಯಿಂದಾಗಲೀ ಪರಿಶುದ್ಧರಾಗುವ ರೆಂದು ಹೇಳಿದ್ದಾರೆ. ಇನ್ನೊಂದೇನಂದರೆ ಈ ಹಿಂದೂ-ಮುಸ್ಲಿಂ ಸಂಬಂಧ ದಿಂದ ಹುಟ್ಟಿದ ಮಕ್ಕಳು ಯಾವ ಪಂಥಕ್ಕೆ ಸೇರಬೇಕೆಂದು. ಮಕ್ಕಳನ್ನು ಪಾಲಿಸುವ ಭಾರವು ಸಂಪೂರ್ಣವಾಗಿ ತಾಯಿಯಾದವಳ ಮೇಲೆ ಬಿದ್ದಿ ರುವದರಿಂದ ಆ ಹಿಂದೂ ಸ್ತ್ರೀಯ ಮಗವು ಹಿಂದುವೆಂದೇ ಗ್ರಹಿಸತಕ್ಕದ್ದು. ಮುಂದೆ ಆ ಮಗುವು ದೊಡ್ಡದಾದ ಮೇಲೆ ತನಗೆ ಯಾವ ಪಂಥಕ್ಕೆ ಸೇರಬೇಕೆಂಬ ಇಷ್ಟವಿರುವದೋ ಆ ಪಂಥಕ್ಕೆ ಸೇರಲಡ್ಡಿಯಿಲ್ಲ. ಈ ಎಲ್ಲ ಮಾತುಗಳು ಮಾತಾಡುವಾಗ ಕ್ಷುಲ್ಲಕವಾಗಿ ಕಂಡರೂ ಸಹ ಅದರ ಹಿಂದೆ

ಎಂಥ ಕೆಟ್ಟ ಪರಿಸ್ಥಿತಿಯು ಹೆಂಗಸರದಿರುವದೆಂದು ಸ್ತ್ರೀಯರೇ ಬುದ್ಧಿವಂತರಾಗಿ ಯೋಚನೆಮಾಡಿ ನೋಡಬೇಕು. ಅವರು ಬುದ್ಧಿವಂತರಾಗಿ ತಮ್ಮ ಒಳ್ಳೆಯದು ಕೆಟ್ಟದ್ದನ್ನು ಅರಿತುಕೊಳ್ಳುವವರೆಗೆ ಅವರ ಜಾತಿಗೇ ಸುಖವಿಲ್ಲ. ಇವರ ಈ ಅಜ್ಞಾನದಿಂದ ಜಗತ್ತಿನಲ್ಲಿ ಅವರ ಮೇಲೆ ಎಷ್ಟೋ ಅನ್ಯಾಯಗಳಾಗುತ್ತವೆ. ಮತ್ತು ಇದರಿಂದ ಜಗತ್ತಿಗಾದರೂ ಎಷ್ಟೋ ಹಾನಿಯಾಗುತ್ತದೆ. ಇದನ್ನು ಗಂಡು, ಹೆಣ್ಣು ಇಬ್ಬರು ಕೂಡಿಯೇ ವಿಚಾರ ಮಾಡತಕ್ಕ ವಿಷಯವಾಗಿದೆ. ಮತ್ತು ಅವರು ವಿಚಾರಮಾಡಿ ತಮ್ಮ ಸುಖಕ್ಕಾಗಿ ಗಂಡನನ್ನು ವಲಿಸದೆ ಸ್ವಾವಲಂಬಿಯಾಗಿ, ನಿಜವಾಗಿ ತಪ್ಪಾವದು, ತಮ್ಮ ಸ್ವಾಭಾವಿಕ ಹಕ್ಕಾವದು ಎಂಬ ಪ್ರಶ್ನೆಗಳನ್ನು ಅವರು ಸ್ವತಃಬಿಡಿಸದ ವಿನಾ ತರಣೋಪಾಯವಿಲ್ಲ.

೧೦-೧-೩೮:— ತಮಗೆ ವೈಯಕ್ತಿಕ ಸಹಾಯಮಾಡದಿದ್ದರೆ ಸಿಟ್ಟಿನಿಂದ ಹೋಗುವದು ಗಂಡು-ಹೆಣ್ಣು ಇಬ್ಬರ ಸ್ವಭಾವವಿರುತ್ತದೆ. ಸಾರ್ವಜನಿಕ ರೀತಿಯಿಂದ ಇಬ್ಬರಿಗೆ ಸಹಾಯ ಮಾಡುವಷ್ಟು ವೈಯಕ್ತಿಕ ಜೀವನದಲ್ಲಿ ಶಕ್ಯವಿಲ್ಲ. ಹೆಣ್ಣುಮಕ್ಕಳ ಸ್ಥಿತಿಯು ಈ ರೀತಿಯಲ್ಲಿ ಹಾವಸೆ ಕಟ್ಟಿ ನಿಂತು ನಿಂತು ಉರುಳುತ್ತಿದ್ದ ಕಲ್ಲಿನಂತಾಗಿದೆ. ಇದನ್ನು ತಿಳಿದು ಹೆಣ್ಣುಮಕ್ಕಳು ಎಷ್ಟು ಕಷ್ಟಬಂದಾಗ್ಯೂ ತಮ್ಮ ಕಾಲಮೇಲೆ ತಾವು ನಿಂತರೆ ಸ್ಥಿರತೆ ಉಳಿಯುವದು. ಇದನ್ನು ತಿಳಿದು ಬಿಟ್ಟುಹೋದ ಹೆಣ್ಣುಮಕ್ಕಳುಗಳನ್ನು ಸಹಕಾರದಿಂದ ನೋಡಿದರೆ ಅವರಿಗೆ ಒಂದಿಲ್ಲ ಒಂದು ವೇಳೆ ತಮ್ಮ ಗುಣವು ತಿಳಿದು ಅವರು ನಮ್ಮೊಡನೆ ಸಹಕಾರದಿಂದಿರಲು ಪ್ರಯತ್ನಿಸುತ್ತಾರೆ. ಯಾವಾಗಲೂ ಯಾರು ಅರುವಿನಿಂದ ಸೋಲುತ್ತಾರೋ ಅವರೇ ನಿಜವಾದ ಯೋಗ್ಯತಾವಾನರು. “ಕಾರ್ಯದ ಕಲ್ಪನೆ ಇದ್ದವರು ತಮ್ಮ ಮತವನ್ನು ಬಿಡದೆ, ಜಗಳಾಡಿದವರ ಮುಂದೆ ಸೋತರೆ ತಾವು ಗೆದ್ದಂತೆಯೇ ಹೊರತು ಸೋತಂತೆ ಅಲ್ಲ.” ಈ ತತ್ವವನ್ನು ತಿಳಿದು ಇವರು ವಿ. ಕ್ಕೆ ಹೋದಾಗ ಅಲ್ಲಿ ಹಿಂದೆ ಬಂದಿದ್ದ ದವಾಖಾನೆಯಲ್ಲಿ ಕೂಡುತ್ತಿದ್ದ ಹೆಣ್ಣುಮಗಳ ಮನೆಯನ್ನು ಹುಡುಕಿಕೊಂಡು ಹೋಗಲು ಅವಳು ಮೊದಲು ಸಿಟ್ಟಿಗೆದ್ದರೂ ಸಹ ನಂತರ ಒಳ್ಳೇರೀತಿಯಿಂದ ನಡೆದುಕೊಂಡಳು.

ಆ ಊರಲ್ಲಿ ಕುರುಡನೊಬ್ಬನನ್ನು ಆತನ ಹೆಂಡತಿಯು ಕೈಹಿಡಿದುಕೊಂಡು ಮನೆಮನೆಗೆ ಹೋಗಿ ಭಿಕ್ಷೆ ಬೇಡುತ್ತಿದ್ದಳು. ಅವರಿಗೆ ಮೂರು ಮಕ್ಕಳಿದ್ದರು. ಜೀವನವು ಬಹಳ ಕಷ್ಟವಾಗಿತ್ತು. ಮಾಸ್ತರಿಣಿಯು ಅವರನ್ನು ಸಂಘಕ್ಕೆ ಹೋಗಹೇಳಲು ಅವಳಾದರೂ ಸಹ ಒಪ್ಪಿ ಸಂಘಕ್ಕೆ ಬಂದು ಸೇರಿದಳು.

೧೧-೧-೪೮:— ಸಾಧಾರಣವಾಗಿ ಮನುಷ್ಯನು ತನ್ನಲ್ಲಿಯ ಯೋಗ್ಯತಾ, ಪರಿಸ್ಥಿತಿ ತಿಳಿದುಕೊಂಡು ನಡೆದಲ್ಲಿ ಸುಖಿಯಾಗುತ್ತಾನೆ. ಆದರೆ ಇಡೀ ಜಗತ್ತು ಕೃತ್ರಿಮ ರೀತಿಯಲ್ಲಿ ನಡೆದದ್ದರಿಂದ ಕೃತ್ರಿಮ ಯುಕ್ತಿಯಿಂದ ಸುಖವು ಸ್ವಲ್ಪವೂ ಸಿಗಲಾರದು. ಒಂದಾ ವೇಳೆ ಪ ವಿನಂತಿದ್ದರೆ ಸಿಗಬಹುದು, ಕೃತ್ರಿಮ ಕಾರ್ಯಗಳು ಗೊತ್ತಾಗದ್ದರಿಂದ ದೇ ರೆಂದು ದೇವರ ಮೇಲೆ ಭಾರಹಾಕಿ ಸಮಾಧಾನ ಹೊಂದುತ್ತಾನೆ. ಆದ ಕೆಟ್ಟ ಪರಿಸ್ಥಿತಿ ದುಃಖ ಇವುಗಳು ಬಂದೊಡನೆ ದೇವರೇ ತಂದನೆಂದು ಹೇಳುವದರಿಂದ ಸ್ವಲ್ಪವಾದರೂ ಕೃತ್ರಿಮ ರೀತಿಯಿಂದ ಸಮಾಧಾನವಾಗುತ್ತದೆ. ಈ ರೀತಿಯಿಂದ ಕೇವಲ ಕೆಟ್ಟ ಪರಿಸ್ಥಿತಿಯಲ್ಲಿದ್ದ ಅವರನ್ನು ಇಲ್ಲಿಗೆ ಕರೆತಂದಿಡಲು ಅವರಿಗೆ ಸ್ವರ್ಗವೇ ಸಿಕ್ಕಂತಾಗಿತ್ತು. ಆ ಕುರುಡನು ಚುಟ್ಟಾ ಬೇಡಲು ಸುರುಮಾಡಿದನು. ಇದರಿಂದ ಹೇಗೆ ಮಾಡಬೇಕೆಂ ಪ್ರಶ್ನೆ ಬಂದಿತು. ಅವರು ತಂದೆ, ತಾಯಿ, ಮಕ್ಕಳು ಇಷ್ಟೇ ಜನರಿದ್ದು ರಿಂದ ಸಂಸ್ಥೆಯವರು ಕೇವಲ ಸಾಮಾನು ತಂದುಕೊಟ್ಟಲ್ಲಿ ಅವರೇ ಎಲ್ಲ ಕೆಲಸ ಮಾಡುವರೆಂದು ನಂಬಿದ್ದರು. ಆದರೆ ಅವರು ನೆರೆಹೊರೆ ಮನೆ ಹೋಗಿ ಚುಟ್ಟ, ಬೇಳೆಯಸಾರು, ಮೆಂಥೆದಹಿಟ್ಟು ಚಹಾಕಾಫಿ ಮೊ ಲಾದವುಗಳನ್ನು ತಂದು ಜೀವನವನ್ನು ಮಾಡುತ್ತಿದ್ದರು. ಮಾ. ಇವರು ಅ ರಿಗೆ ಬುದ್ಧಿಯನ್ನು ಹೇಳುತ್ತಿದ್ದರು. ಇದರಿಂದ ಅವರಿಗೆ ಹೊರಗಿನವ ಉಪಕಾರ ಜಾಸ್ತಿಯಾದಂತೆ ಆಗಿ ಇಲ್ಲಿಯ ಉಪಕಾರ ತಿಳಿಯದಂತಾಯಿತು. ಅವರ ದೊಡ್ಡ ಮಗಳು ೧೫ ವರ್ಷದ ವಿಧವೆ ಹುಡುಗಿ ಇದ್ದಳು ಅವಳನ್ನು ಮೊದಲು ಹೊರಗಿದ್ದ ಹೆಣ್ಣುಮಗಳು ತನ್ನ ಮನೆಗೆ ಕರೆದುಕೊಂಡು ಹೋಗುವದು, ಚಹ ಕಾಫಿ ಕುಡಿಸುವದು ಇವೇ ಮೊದಲಾ

ಚಟಗಳನ್ನು ಕಲಿಸಿದ್ದಲ್ಲದೆ ಅಷ್ಟದಾರಿಗೆ ಹುಡುಗಿಯು ಕಾಲುಜಾರುವಂತೆ ಮಾಡಲು ಪ್ರಯತ್ನಿಸುತ್ತಿದ್ದಳು. ಸ್ವತಃ ತಾಯಿಯೇ, ಮಗಳ ಸುಖಕ್ಕಾಗಿ ಎಂದು ಇವಕ್ಕೆ ಅನುವುಮಾಡಿಕೊಡುತ್ತಿದ್ದಳು. ವೈಯ್ಯಾರ ಒನಪುಗಳಿಗೆ ಆಸ್ಪದ ಕೊಡುತ್ತಿದ್ದಳು. ಇದು ಸಂಸ್ಥೆಯ ನಿಯಮ ಹಾಗೂ ಧ್ಯೇಯಕ್ಕೆ ತೀರ ವಿರುದ್ಧವಿದ್ದುದರಿಂದ ದಿನಾಲು ಸಂಸ್ಥೆಯ ಚಾಲಕರೊಡನೆ ಮಾತು ಮಾತಿಗೆ ವ್ಯಾಜ್ಯ ನಡೆಯಿತು.

೧೨–೧–೪೮:— ಅವರು ಬ್ರಾಹ್ಮಣರಿದ್ದುದರಿಂದ ನಾಲ್ಕಾರು ಕಡೆಗೆ ಊಟ, ದಕ್ಷಿಣೆಗೆ ಕರೆಯಹತ್ತಿದರು. ಅವರ ಇಡೀ ಭಾರವನ್ನು ಸಂಸ್ಥೆಯು ಹೊತ್ತಾಗ್ಯೂ ಸಹ ಅವರಿಗೆ ಬೇರೆಯವರ ಒಂದು ದಿನದ ಊಟ, ದಕ್ಷಿಣೆಯು ಮಹತ್ವ ಜಾಸ್ತಿಯಾಯಿತು. ಶ್ರೀ. ಕೃ. ಇವರು ಆ ಹೊತ್ತಿಗೆ ಬೋರ್ಡಿಂಗಿನ ಮೇಲಿದ್ದರು. ಅವರು ಬೇರೆ ಮನೆ ಮಾಡಿಕೊಂಡಿದ್ದರು. ಶ್ರೀ. ಕೃ. ಇವರ ಹಿಂದಿನ ಅಂದರೆ ಮನೆ ಇಲ್ಲದೆ ಬಂದಾಗ ಅಪವಾದ ಹೊತ್ತು ಮಿಶ್ನವರಲ್ಲಿ ಕೆಲಸ ಮಾಡುತ್ತಿದ್ದ ಸಂಗತಿಯನ್ನು ತಿಳಿದಿದ್ದ ಆ ಹೊಲಿಗೆಯ ಧೂರ್ತ ಹೆಣ್ಣು ಮಗಳು, ಇವರಿದ್ದಲ್ಲಿ ಬೋರ್ಡಿಂಗಿನವರಿಗೆ ಆತಂಕವಾಗುತ್ತಿದೆಯೆಂದು ತಿಳಿದು, ಇವರ ಮೇಲೆ ಸೊಟ್ಟ ಹೊರಿಸಹತ್ತಿದಳು. ಆ ಕುರುಡನಾದರೂ ತಿರುಗಿ ಭಿಕ್ಷೆಬೇಡಲು ಹೋಗಹತ್ತಿದನು. ಅಲ್ಲಿ ಇಲ್ಲಿ ಬೇಡಿ ಕಾಫಿ. ಚಹಸೊಪ್ಪು ತಂದು ಬೋರ್ಡಿಂಗಿನಲ್ಲಿ ಚಹ ಮಾಡಿ ಕುಡಿಯಹತ್ತಿದರು. ಹೀಗೇಕೆ ಮಾಡುತ್ತೀರೆಂದು ಮಾ. ಇವರು ಸಿಟ್ಟಿಗೆದ್ದು ಕೃ. ಇವರನ್ನು ಕೇಳಹತ್ತಿದರು. ಏನು ಮಾಡಬೇಕೆನ್ನುವದು ಕೃ. ಇವರಿಗೆ ತಿಳಿಯದಂತಾಯಿತು. ಬೋರ್ಡಿಂಗಿನವರಿಗೆ ಹೇಳಹೋದರೆ ಅವರು ಇಲ್ಲದಸಲ್ಲದ ಆರೋಪಗಳನ್ನು ಹೊರಿಸಿ, ಇದಿರುತ್ತರವನ್ನು ಕೊಡುತ್ತಿದ್ದರು. ಸುಮ್ಮನಿದ್ದರೆ ಶಕ್ತಿ ಭಂಗವಾಗುವದು. ಇಷ್ಟರಲ್ಲೇ ಆ ಹುಡುಗಿಯು ಬಸರಾಗಿದ್ದ ಸುದ್ದಿ ಹೊರಬಿದ್ದಿತು. ಇನ್ನೇನು ಮಾಡಬೇಕೆಂದು ಎಲ್ಲರಿಗೂ ಹೆದರಿಕೆಯಾಯಿತು. ಹುಡುಗಿಯ ತಾಯಿಯು ಶ್ರೀ. ದಾ. ಇವರ ಮೇಲೆ ಅಪವಾದ ಹೊರಿಸತ್ತಿದಳು. ಆ ಹುಡುಗಿಯು ಯಾರ ಮನೆಗೆ ರಾತ್ರಿಯಲ್ಲಿ ಯಾರ ಸಂ[illegible] ಹತ್ತಿ

ವರು. ಹೀಗಾಗಿ ಓಣಿಯಲ್ಲೆಲ್ಲಾ ಇದೇ ಬೊಬ್ಬಾಟವಾದ್ದರಿಂದ ಅವರನ್ನು ಬೇಗನೆ ಸಂಸ್ಥೆಯಿಂದ ಬಿಡಿಸಲಾಯಿತು. ಜ್ಞಾನದಿಂದಲೂ, ನಮ್ರತನ ದಿಂದಲೂ, ನಡೆದರೆ ಲಾಭಸಿಗುತ್ತದೆಂಬ ತಿಳುವಳಿಕೆಯಿಂದ ನಡೆದರೆ ಹೆಚ್ಚಿನ ಲಾಭ ಸಿಗುತ್ತದೆ. ಅವರು ಬೋರ್ಡಿಂಗನ್ನು ಬಿಡುವಾಗ್ಯೆ ಇಲ್ಲದ ಸಲ್ಲದ ಅಪ ವಾದಗಳನ್ನು ಹೊರಿಸಹತ್ತಿದರು. ಕಾರ್ಯಕರ್ತರು ಇಂಥವರ ಮೇಲೆ ಸಿಟ್ಟು ರೊಚ್ಚಿಗೇಳುವದು, ಅವರನ್ನು ದೂಷಿಸುವದು ತಪ್ಪು. ಏಕೆಂದರೆ ಅಜ್ಞಾನೀ ಜನರು, ಬೇಜವಾಬದಾರೀ ಜನರು ಹುರುಳಿಲ್ಲದ ಆತ್ಮ ಸಮರ್ಥನಾರ್ಥವಾಗಿ ಇಲ್ಲದ ಸಲ್ಲದ ಆರೋಪಗಳನ್ನು ಹೊರಿಸಲು ಹಿಂದುಮುಂದು ನೋಡುವ ದಿಲ್ಲ. ಕಾರ್ಯಕರ್ತರು ಇಂಥಹ ಕ್ಷುಲ್ಲಕ ಜನರ ಅಹಂಕಾರವನ್ನು ಕೆರಳಿಸ ಬಾರದು, ರೇಗಬಾರದು. ಮುಂದೆ ಆ ಕುಟುಂಬದವರೆಲ್ಲರೂ ಸಂಸ್ಥೆ ಬಿಟ್ಟು ಹೋಗಿಬಿಟ್ಟರು. ಕಾಲಾಂತರದ ಮೇಲೆ ತೀ. ದಾ. ಇವರ ಮೇಲಿನ ಅಪವಾದವು ಸುಳ್ಳೆಂದು ಜನರಿಗೆ ತಿಳಿಯಿತು. ಮುಂದೆ ಆ ಹುಡುಗಿಯನ್ನು ಆಕೆಯ ಅಣ್ಣನು ಕೊಂದುಹಾಕಿದನೆಂದು ಸುದ್ದಿ. ಆ ಕುರುಡ ದಂಪತಿ ಗಳು ಹೋದ ಸ್ವಲ್ಪ ದಿನಗಳಮೇಲೆ ಸು. ದೀದ ಒಬ್ಬ ಹೆಣ್ಣುಮಗಳು ಸಂಸ್ಥೆಗೆ ಬಂದು ಸೇರಿದಳು.

೧೩-೧-೪೮:— ಆ ಹೆಣ್ಣುಮಗಳು ಹಳ್ಳಿ ಊರಿನವಳು. ಆದರೆ ಚೆಲುವಳೂ, ಬುದ್ಧಿವಂತಳೂ ಇದ್ದಳು. ಅವಳಿಗೆ ಆ ಊರಿನಲ್ಲಿ ಇಂಗ್ಲೀಷ ಕಲಿಸುತ್ತೇನೆಂದು ಒಬ್ಬ ಮಾಸ್ತರನು ಗಂಟುಬಿದ್ದ. ಆದರೆ ಊರಿನಲ್ಲಿ ನಾನಾರೀತಿಯಿಂದ ಇವರ ಹೆಸರಿನಲ್ಲಿ ಬೊಬ್ಬಾಟ ಶುರುವಾಯಿತು. ಅವ ಳಿಗೆ ಲಗ್ನಮಾಡಿ ಮನೆ ಅಳಿಯನನ್ನು ಮಾಡಿಕೊಂಡಿದ್ದರು. ಮನೆಯ ಪರಿಸ್ಥಿತಿ ಸರಿ ಇರಲಿಲ್ಲ. ಗಂಡನಾದರೂ ಪೆದ್ದ. ಈ ರೀತಿ ಇರಲು ವಿದ್ಯೆ ಕಲಿಯಲೆಂದು ಅವಳನ್ನು ಇಲ್ಲಿ ತಂದಿಟ್ಟರು. ಆದರೆ ಇಲ್ಲಿ ಅವಳಿಗೆ ಸರಿ ಎನಿಸಲಿಲ್ಲ. ಅವಳು ಪತ್ರವ್ಯವಹಾರಗಳನ್ನು ಸಂಸ್ಥೆಯು ನೋಡುವದೆಂಬುದು ಅವಳಿಗೆ ತಿಳಿದಿರಲಿಲ್ಲ. ಆದರೆ ಇವರಿಬ್ಬರ ನಡುವೆ ( ಇವಳನ್ನು ತಂದಿಟ್ಟ ಗೃಹಸ್ಥ ) ಏನಿರುವದೆನ್ನುವದು ಸಂಸ್ಥೆಗೆ ಅವರ ಪತ್ರಗಳ ಮೇಲಿಂದ ಗೊತ್ತಾಗುತ್ತಿತ್ತು. ಈ ಪತ್ರವನ್ನು ನೋಡುವ ಉದ್ದೇಶವೆಂದರೆ ಅವರ

ಪತ್ರದ ಗುಟ್ಟನ್ನು ಹೊರಗೆ ಹಾಕಬೇಕೆಂದಲ್ಲ. ಕೇವಲ ಆ ಪತ್ರದಲ್ಲಿ ಸಂಸ್ಥೆಯ ನಾಶಕ್ಕಾಗಿ ಯಾವದಾದರೂ ವಿಘಾತಕ ಸಂಗತಿ ಇದೆಯೋ ಎಂದು ನೋಡುವದಕ್ಕಾಗಿ. ಗಂಡುಮಕ್ಕಳ ಸಂಸ್ಥೆಗಳಲ್ಲಿ, ಅವರ ನೀತಿನಿಯಮಗಳು ಬೇರೆ ಇರುವದರಿಂದ ಇದರ ಅಗತ್ಯ ಅಷ್ಟು ಬೀಳದಿದ್ದರೂ ಸಹ ಹೆಣ್ಣು ಮಕ್ಕಳ ಸಂಸ್ಥೆಗಳಲ್ಲಿ ಸೃಷ್ಟಿನಿಯಮಕ್ಕನುಸರಿಸಿ, ಅವರಿಗೆ ಬಸಿರು ಬಯಕೆ ಗಳಾಗುವದರಿಂದ ಅವರಿಗಾಗಿ ಸಂಸ್ಥೆಯ ಕಟ್ಟಳೆಗಳು ಬೇರೆ ಇರಬೇಗುತ್ತದೆ. ಪ್ರೀತಿ ಪತ್ರದ ಮೇಲಿಂದ ಮುಂದಾದರೂ ಅವರ ತಪ್ಪು ಹೊರಬಿದ್ದು ಅದ ಕ್ಕವರು ತಪ್ಪನ್ನು ಸಂಸ್ಥೆಯ ಮೇಲೆ ಹೊರಿಸಿ, ಸಂಸ್ಥೆಗೆ ಬಂದಿದ್ದರಿಂದ ಇಲ್ಲೇ ತಪ್ಪು ಘಾತವಾಯಿತೆಂದು ಹೇಳುವ ಪ್ರವೃತ್ತಿಯವರಿದ್ದದ್ದರಿಂದ ಸಂಸ್ಥೆಯನ್ನು ಉಳಿಸುವದಕ್ಕಾಗಿ ಇಂಥ ಪತ್ರಗಳನ್ನು ನೋಡಿ ತೆಗೆದಿಟ್ಟು ಕೊಳ್ಳಬೇಕಾಯಿತ್ತು. ಹೀಗೆ ಮಾಡುವದರಿಂದ ಅದು ಮುಂದೆ ಪ್ರಸಂಗವಶಾತ್ ಸಹಾಯಕವಾಗುವದು. ಆ ಹೆಣ್ಣುಮಗಳು ಅಲ್ಲಿ ನಿಲ್ಲುವ ಮನಸ್ಸಿಲ್ಲದೆ, ಹೋಗಬೇಕೆಂದು ಬಹಳ ಹವಣಿಸುತ್ತಿದ್ದಳು. ಮೇಲೆ ಮೇಲೆ ಸಂಸ್ಥೆಯನ್ನು ದೂಗಳುತ್ತಾ ಇಲ್ಲಿ ಊಟ, ಉಡಿಗೆ ಸರಿಯಿಲ್ಲ, ಇಲ್ಲಿ ತೊಂದರೆ ಕೊಡುತ್ತಾರೆ, ಅಭ್ಯಾಸ ಹೇಳುವವರು ಯಾರೂ ಇಲ್ಲ, ಮುಂತಾದ ಪತ್ರಗಳನ್ನು ಬರೆಯುತ್ತಿದ್ದಳು. ಆದರೆ ಅವಳನ್ನು ಮರಳಿ ಅವಳೂರಿಗೆ ಕರೆದುಕೊಂಡು ಹೋಗುವ ಪರಿಸ್ಥಿತಿ ಅಲ್ಲಿರದ್ದರಿಂದ ಅವಳ ಪ್ರಿಯಕರನು ಅವಳು "ಇಲ್ಲಿಯೇ ಇದ್ದರೆ ಅವಳ ಕಲ್ಯಾಣ ಇಂದಿಲ್ಲ ನಾಳೆಯಾದರೂ ಆಗುವದು. ಎಲ್ಲವನ್ನೂ ಸಹಿಸಬೇಕು. ಕಷ್ಟಪಡದೆ ಕಲ್ಯಾಣವಿಲ್ಲ." ಮುಂತಾದ ಗೊಡ್ಡ ಉಪದೇಶಗಳಿಂದ ಅವಳಿಗೆ ಬೋಧೆ ಮಾಡಿ ತಾನು ಜಾರಿಕೊಂಡನು. ಅವಳು ಎಲ್ಲ ತೆರದಿಂದ ನಿರಾಶಳಾಗಿ ಯಾರೂ ತನ್ನನ್ನು ಕರೆದುಕೊಂಡು ಹೋಗುವದಿಲ್ಲೆಂದು ಕಂಡು ಹಿಡಿದು ಬುದ್ಧಿವಂತಳಿರುವದರಿಂದ ಮತ್ತು ಕಾಲವು ಕಾಲಾಂತರದಿಂದ ಎಲ್ಲವನ್ನು ಮರಸುತ್ತದೆಂಬ ತತ್ವಕ್ಕನುಗುಣವಾಗಿ ಅವಳು ಇಲ್ಲಿಯೇ ಬೆರೆತು ಹೋಗಲು ಹಂಚಿಕೆಗಳನ್ನು ಮಾಡಹತ್ತಿದಳು.

೧೪-೧-೪೪:— ಮುಂದೆ ಅವಳು ತಿರುಗಿ ಹೋಗಲು ಹವಣಿಸುತ್ತಿದ್ದುದರಿಂದ ಯಾರು ಅವಳನ್ನು ಕಲ್ಯಾಣದ ಬುದ್ಧಿಯಿಂದ ಇಲ್ಲಿ ತಂದಿಟ್ಟ

ದ್ದರೋ ಅವರು ಸಂಭಾವಿತಗಿರಿ ತೋರಿಸುತ್ತಿದ್ದರು. ಅಲ್ಲಿ ಕರೆದುಕೊಂಡು ಹೋದರೆ ತಮಗೆ ಅಪಮಾನ ತಟ್ಟುವದೆಂಬ ಹೆದರಿಕೆಯಿಂದ "ನೀನಿಲ್ಲರು ಮೊದಲು ಕಷ್ಟಪಟ್ಟರೆ ನಿನ್ನ ಶಾಶ್ವತ ಕಲ್ಯಾಣವಾಗುವದು. ಇಲ್ಲವಾದರೆ ನೀನು ಹಾಳಾಗುತ್ತೀ" ಎಂಬ ಉಪದೇಶಮಾಡಿ ಅವಳನ್ನು ಒಳ್ಳೇ ಬಂದೋಬಸ್ತಿನಲ್ಲಿಡಿರಿ ಎಂದು ಇಲ್ಲದಿದ್ದರೆ ಅವಳು ಹಾಳಾಗುತ್ತಾಳೆಂದು ಸಂಸ್ಥೆಯ ಚಾಲಕರಿಗೆ ಹೇಳಿ ಅದರಲ್ಲಿ ತಮ್ಮದೇನು ಅಂಗವಿಲ್ಲೆಂಬಂತೆ ಹೊರಟು ಹೋದರು. ಬಂಧನದಲ್ಲಿಟ್ಟರೆ ಕಲ್ಯಾಣವಾಗುವದೆಂಬುದು ಹೆಂಗಸರ ಸಲುವಾಗಿ ಗಂಡಸರು ತಿಳಿದುಕೊಂಡಿರುವ ಶತಸಿದ್ಧಾಂತದ ಮಾತು. ಈಗ ಎಷ್ಟೋ ಜನರ ಮನೆಯಲ್ಲಿ ನೋಡುವದೆಂದರೆ ತಂದೆಯು ಮಕ್ಕಳಿಗೆ ಅವಶ್ಯವಿದ್ದಷ್ಟನ್ನು ಸಹ ಕೊಡದ್ದರಿಂದ ಗಂಡುಮಕ್ಕಳು ತಂದೆ ಸತ್ತೊಡನೆಯಾಗಲೀ ಅಥವಾ ತಂದೆ ಸ್ವಲ್ಪ ಅಶಕ್ತನಾದೊಡನೆಯಾಗಲೀ ರೊಕ್ಕ ಹಾಳು ಮಾಡುತ್ತಾರೆ ಇದರಂತೆ ಹೆಣ್ಣುಮಕ್ಕಳ ಪರಿಸ್ಥಿತಿಯಾದರೂ ಆಗಿದೆ. ಯಾವದೇ ಆಗಲಿ ಬಲವಂತದಿಂದ ಹತ್ತಿಕ್ಕುವ ವಸ್ತುವಿಗೆ ಸ್ವತಂತ್ರ ಕೊಟ್ಟೊಡನೆ ಅದು ಒಮ್ಮೆಲೇ ಸ್ಫೋಟವಾದಂತಾಗಿ ಅಳತೆಮೀರಿ ಹೊರಬೀಳುವದು. ಬಂಧನದಲ್ಲಿಯು ನಿಯಮದೊಳಗೆ ಶಿಥಿಲತೆ ಮಾಡದಿದ್ದರೆ ಹಾನಿಯಾಗುವ ಸಂಭವವಿದೆ. ಮುಂದೆ ದಿನ ಹೋದಂತೆ ಚಿರಣಿಯ ಮಧ್ಯದಲ್ಲಿ ಹಾಯುವ ಸಲುವಾಗಿ ಇಟ್ಟ ಕೆಂಡದಂತಾಗುವರು. ಪಾಪ ನರಕ, ಇವುಗಳ ಬೋಧನೆ ಮಾಡಿದ್ದರಿಂದಲೇ ಇಷ್ಟು ದಿನಗಳವರೆಗೆ ಹಿಂದುಸ್ತಾನವು ಬಂಧನದಲ್ಲಿರುವ ಪ್ರಸಂಗ ಬಂದಿತು. ಬಂಧನದ ಉದ್ದೇಶ, ಗುರಿ, ಪರಿಣಾಮ ಇವುಗಳಬಗ್ಗೆ ತಾರತಮ್ಯ ಜ್ಞಾನಕೊಡುತ್ತ ಹೋಗಿ, ಕೆಲವೊಂದು ವಯಸ್ಸಾದ ಮೇಲೆ ಹೇಗಿದ್ದರೂ ಗಂಡಸರಿಗೆ ಕಾಯದೆಯಿಂದ ಸ್ವತಂತ್ರ ಕೊಡುತ್ತಾರೆ. ಇದರಿಂದ ಪೆಟ್ಟು ತಿಂದವರು ಜ್ಞಾನಿಯಾಗುತ್ತಾರೆ. ಆದರೆ ಹೆಣ್ಣುಮಕ್ಕಳಿಗೆ ಆಮರಣ ಸ್ವತಂತ್ರವಿಲ್ಲದ್ದರಿಂದ ಅವರು ಅಧೋಗತಿಗೆ ಇಳಿದಿದ್ದಾರೆ. ಕೆಲವು ವಿಚಾರಶೀಲರಿಗೂ ಸಹ ವಿಚಾರ ಬಂದದ್ದೆಂದರೆ" ಹೆಂಗಸರನ್ನು ಬಂಧನದಲ್ಲಿಟ್ಟದ್ದರಿಂದಲೇ ಹಿಂದುಸ್ತಾನವು ಪವಿತ್ರ"ನೀತಿಯುಳ್ಳದೆ" ಎಂದು ಪರಕೀಯರಾದರೂ ಇದನ್ನೇ

ಹೇಳುತ್ತಿರುತ್ತಾರೆ. ಆದರೆ ಈ ಬಂಧನದಿಂದ ಹೆಂಗಸರ ಮೇಲೆ ಏನ್ನು ಪರಿಣಾಮವಾಗಿದೆ ಎನ್ನುವದು ಯಾರಿಗೂ ತಿಳಿದಿಲ್ಲ. ಅವರಲ್ಲಿ ಹೆದರಿಕೆ, ಭಯಗಳ ಆಗರವಾಗಿರುವದು ಜಗತ್ತಿಗೆ ತಿಳಿಯದು. ಮ. ಗಾಂಧಿಯವರು "ಯಾರೇ ಆಗಲಿ ತಮ್ಮ ಬಂಧನವನ್ನು ತಾವೇ ಹಾಕಿಕೊಳ್ಳಬೇಕ" ನ್ನುತ್ತಾರೆ. ಸಣ್ಣವರಿಂದ ಈ ಅಭ್ಯಾಸ ಮಾಡಿದರೆ ಒಳ್ಳೆಯದಾಗುವದು. ಅವರವರ ಮನೋನಿಗ್ರಹವನ್ನು ಸ್ವತಃ ಮಾಡುವದರಿಂದ ಅವರಲ್ಲಿ ಅವರಿಗೆ ಆನಂದ ಸಿಗುವದು. ಪರಿಸ್ಥಿತಿ ಬದಲಾದಂತೆ ಜನರೂ ನಿಯಮವನ್ನು ಬದಲಾಯಿಸಬೇಕಾಗುತ್ತದೆ. ಹಿಂದೆ ಯಾವಾಗಲೋ ಹೆಂಗಸರ ಮೇಲೆಬಂದ ಕೆಲವು ಪ್ರಸಂಗಗಳ ಸಲುವಾಗಿ ಹಾಕಿದ ಬಂಧನಗಳನ್ನೇ (ಆಗಿನ ದಿನಗಳಲ್ಲಿ ಆ ಪರಿಸ್ಥಿತಿ ಇದ್ದುದರಿಂದ ಹಾಕಿದ ಬಂಧನವು) ಈಗ ಪರಿಸ್ಥಿತಿಯು ಬದಲಾಗಿದ್ದರೂ ಸಹ ಆದರಂತೆ ನಡೆದರೆ ಪರಿಣಾಮವು ಮುಂದೇನಾಗುವದೆಂದು ಹೇಳುವದು ಕಠಿಣ. ಸಾರಾಸಾರ ವಿಚಾರ ಶಕ್ತಿ ಬೆಳೆಸಿ ಪ್ರತಿಯೊಬ್ಬರು ಸ್ವಾವಲಂಬಿಗಳಾಗುವಂತೆ ಸಂಸ್ಕಾರಗಳನ್ನು ಮಾಡಬೇಕು.

೧೫-೧-೪೮:— ಸರ್ವಸಾಧಾರಣವಾಗಿ ಹೆಣ್ಣುಮಕ್ಕಳ ಮೇಲೆ ನೀತಿನಿಯಮದ ಅತಿ ಬಂಧನ ಹಾಕುವದರಿಂದ ಅವರ ಮೇಲೆ ಅದರ ದುಷ್ಪರಿಣಾಮವಾಗುತ್ತದೆ. ಸೃಷ್ಟಿನಿಯಮದ ಅತಿರೇಕ ಯಾವದು? ಸಂಸ್ಥೆಯ ನಿಯಮದ ಅತಿರೇಕ ಯಾವುದು? ಈ ವಿಷಯಗಳನ್ನು ವಿಚಾರಮಾಡಿ ನಿಯಮಗಳನ್ನು ಮಾಡಬೇಕೇ ಹೊರತು ತಮ್ಮ ತಮ್ಮ ಸೋವಿಗೆಂದು ಮನಬಂದಂತೆ ನಿಯಮ ಮಾಡಿದರೆ ಆದರಿಂದ ದುಷ್ಪರಿಣಾಮದ ಫಲವನ್ನು ಅನುಭವಿಸಬೇಕಾಗುವದು. ನಮ್ಮ ಸಂಸ್ಥೆಯ ವಸತಿಗೃಹದ ವಿದ್ಯಾರ್ಥಿನಿಯರು ಸಂಸ್ಥೆಯ ಮೇಲಿನವರು ಹಾಜರಿಲ್ಲದಾಗ ಹೊರಗಿನವರೊಡನೆ ಮಾತನಾಡಬಾರದೆಂಬ ನಿಯಮವಿದೆ. ಇದರಿಂದ ಹುಡುಗಿಯರ ಮನಸ್ಸಿಗೆ ತಾಪವಾಗುವದು. ಆದರೆ ಈ ನಿಯಮ ಮಾಡುವಾಗ ಮೇಲ್ವಿಚಾರಕರು ಯಾವ ಉದ್ದೇಶದಿಂದ ಮತ್ತು ಯಾವ ಅನುಭವದ ಮೇಲಿಂದ ಇದನ್ನು ಮಾಡಿದರೆಂಬುವದನ್ನು ವಿದ್ಯಾರ್ಥಿನಿಯರು ವಿಚಾರ ಮಾಡಬೇಕು. ಕೆಲವು

ಹುಡುಗಿಯರು ಯಾವದೇ ವಿಷಯಕ್ಕೆ ತಮ್ಮ ಮನನೊಂದಿತೆಂದು ಸಂಸ್ಥೆಯ ವಿರುದ್ಧವಾಗಿ ಬೇರೆಯವರೊಡನೆ ಮಾತಾಡುತ್ತಾರೆ. ಅದು ಸರಿ ಇರಲಿ ತಪ್ಪಿರಲಿ ತಮ್ಮ ಮನಸ್ಸಿಗೆ ಸರಿಬರದ್ದರಿಂದ ಅದು ಕೆಟ್ಟದ್ದೆಂದು ಅವರ ಗ್ರಹಿಕೆ. ಹಿಂದೆ ಇಂಥ ಎಷ್ಟೋ ಉದಾಹರಣೆಗಳಾಗಿ ಮೇಲ್ವಿಚಾರಕರಿಗೆ ಆದರ ಪೆಟ್ಟು ಬಿದ್ದದ್ದರಿಂದ ಈ ನಿಯಮ ಮಾಡಬೇಕಾಯಿತು. ಕೆಲವು ಹುಡುಗಿಯರು ತೋರಿಕೆಗೆ ಒಳ್ಳೇ ಸಭ್ಯರೀತಿಯಲ್ಲಿದ್ದು ಒಳಗಿಂದೊಳಗೆ ಹೊರಗಿನವರೊಡನೆ ಕಾರಸ್ಥಾನಮಾಡಿ, ಸಮಾಜದ ವಿರುದ್ಧಹೋಗುತ್ತಿದ್ದರು. ಅಂಥವರ ತಪ್ಪು ಒಂದಿಲ್ಲೊಂದು ದಿನ ಹೊರಬೀಳುವದು. ಈ ಎಲ್ಲವನ್ನು ವಿಚಾರಮಾಡಿ ಈ ನಿಯಮ ಹಾಕಲಾಗಿದೆ. ಹೆಣ್ಣುಮಕ್ಕಳು ಇನ್ನೂ ಡಾಂಭಿಕ ರೀತಿಯಲ್ಲಿ ನಡೆಯುತ್ತಾರೆ. ಅವರು ಸರಳ ರೀತಿಯಲ್ಲಿ ನಡೆದರ ಈ ತರದ ಬಂಧನಗಳಾವವೂ ಅವರಿಗೆ ಹತ್ತುತ್ತಿರಲಿಲ್ಲ. ಜಗತ್ತು ಸುಧಾರಿಸುತ್ತಾ ಹೊರಟಿದ್ದರೂ ಸಹ ಹೆಣ್ಣುಮಕ್ಕಳು ತಮ್ಮ ಗುಣವನ್ನು ಬಿಡಲಾರೆವೆಂದು ಹಟತೊಟ್ಟು ಕುಳಿತಿರುವದೇ ಸಂಸ್ಥೆಯ ಏಳಿಗೆಗೆ ಒಂದು ದೊಡ್ಡ ಕುಂದಾಗಿದೆ. ಸು ಹುಡುಗಿಯು ಬೋರ್ಡಿಂಗಿನಲ್ಲಿರುವಾಗ ಶ್ರೀ. ಕೃ. ಇವರು ಬೋರ್ಡಿಂಗಿನ ಮೇಲ್ವಿಚಾರಕರಿದ್ದರು.

ಈ ಮಾನವಿ ಕೃತ್ರಿಮ ನಿಯಮಗಳ ಭಂಗವೆಷ್ಟಾದರೂ ಅದಕ್ಕಾಗುವ ಶಿಕ್ಷೆಯಿಂದ ಸಂಘಶಕ್ತಿ, ರೊಕ್ಕ ದಬಲ, ಆಪ್ತೇಷ್ಟರಬೆಂಬಲ, ಶೀಘ್ರಸಾಹಸ ಬುದ್ಧಿಚಾತುರ್ಯ ಇವುಗಳ ಸಹಾಯದಿಂದ ಮನುಷ್ಯರು: ವಿಶೇಷವಾಗಿ ಗಂಡರು ಪಾರಾಗುವರು. ಚತುರ್ವಿಧ ಪುರುಷಾರ್ಥಗಳಲ್ಲಿ ಒಂದನ್ನಾದರೂ ಗಳಿಸಲು ಗಂಡಸಿಗೆ ಅಪ್ಪದವಿರುವದರಿಂದ ಅವನ ಆಯುಷ್ಯವು ಸಹ್ಯವಾಗಿರುವದು. ಆದರೆ ಹೆಣ್ಣುಮಕ್ಕಳಿಗೆ ಯಾವ ತೆರನಾಗಿಯೂ ಸ್ವಾತಂತ್ರ್ಯವಿಲ್ಲದ್ದರಿಂದ ಪತಿವ್ರತಾಧರ್ಮವೆ ಎಲ್ಲ ಅವರ ಸರ್ವಸ್ವಿಯಾಗಿದ್ದರಿಂದ ಆದಕ್ಕೆ ತಕ್ಕಂತೆ ಸಮಾಜದ ಕಟ್ಟಳೆಯಾದರೂ ಆಗಿರುವದು. ಕಾನೂನು ಹಾಗು ಸಂಸ್ಥೆಯ ರಚನೆ ಮಾಡಿದ್ದರಿಂದ ಅವರಿಂದ ಸ್ವಲ್ಪಾದರೂ ತಪ್ಪಾದಲ್ಲಿ ಆದು ಅವರದೇ ತಪ್ಪಿರಲ್ಲಿ ಅಥವಾ ಯಾರ ಆಡಳಿತಕ್ಕೆ ಅವರು ಒಳಪಟ್ಟಿರುವರು ಅಂಥ ಗಂಡಸರದೇ ತಪ್ಪಾಗಿರಲಿ ಅಂತೂ

ಹೆಂಗಸರೇ ಅವರು ಗಂಡಾಂತರಕ್ಕೀಡಾಗ ಬೇಕಾಗುವದು. ಸೃಷ್ಟಿ ಅಥವಾ ದೇವರ ನಿಯಮದ ಕಡೆಗೆ ಲಕ್ಷ್ಯಕೊಡದೆ ಬಂಧನಗಳನ್ನು ಹಾಕಿ ದೇವರ ನಿಯಮಗಳಂತೆ ನಡೆಯಲು ಹೊರಟ ಪ್ರವೃತ್ತಿಗಳಿಗೆ ವಿಕಾರ, ಮೂರ್ಖತನ ಮುಂತಾದ ಹೆಸರುಗಳನ್ನು ಇಟ್ಟು, ಹೆಣ್ಣುಮಕ್ಕಳು ಬಸರಾಗುವದು ಕಂಡು ಬರುವಂತಿರುವದರಿಂದ ಅವರನ್ನು ಕುಲಭ್ರಷ್ಟರನ್ನಾಗಿ ಮಾಡಿ ಅನ್ನಾನ್ನ ಗತಿಕರನ್ನಾಗಿ ಮಾಡಿ ಶಿಕ್ಷೆಗೆ ಗುರಿ ಮಾಡಿದ್ದಾರೆ. ಇದು ಬಹಿರಂಗಕ್ಕೆ ಬರಬಾರದೆಂದು ಒಳಗಿಂದೊಳಗೆ ಗರ್ಭಪಾತ ಮಾಡಿಕೊಳ್ಳುವದಾಗಲಿ? ಸ್ಥಳಾಂತರ ತೀರ್ಥಯಾತ್ರೆ ಮುಂತಾದ ಸೋಗಹಾಕಲು ಪ್ರಯತ್ನಪಟ್ಟಿದ್ದಾರೆ. ಆದರೆ ಮನುಷ್ಯನ ನಿಯಮ ಶಿಕ್ಷೆ ಇಲ್ಲದೆ ತಪ್ಪಿಸಿ ಡಾಂಭಿಕತನದಿಂದ ದೊಡ್ಡವರು ಪವಿತ್ರರೆಂದು ಅನ್ನಿಸಿಕೊಳಬಹುದು ಆದರೆ ದೊಡ್ಡ ಹೆಸರಿನ ಅಥವಾ ತತ್ವದ ಕೆಳಗೆ ನಿಯಮಗಳ ಭಂಗ ಮಾಡಿಸಹ ಸೃಷ್ಟಿನಿಯಮಗಳ ಭಂಗಮಾಡಿದವರಿಗಿಂತ ಸುಖಿಗಳಾಗಿದ್ದಾರೆ. ಎರಡು ನಿಯಮಗನ್ನೂ ಭಂಗಮಾಡಿದವರ ದುಃಖಕ್ಕೆ ಮಾತ್ರ ಮಿತಿಯಿಲ್ಲ. ಮರ್ಮವಿಲ್ಲದೆ ವಿಚಾರಗಳ ಕಲಕುಮಾಲಕುಗಳನ್ನು ಅಂದರೆ ಸಮ್ಮಿಶ್ರ ಮಾಡಿದ್ದರಿಂದ ಉಂಟಾದ ದೋಷಗಳನ್ನು ನಿಂಗಡಿಸಲು ಯತ್ನಿಸಿದ ವಿನಃ ಹೆಣ್ಣುಮಕ್ಕಳ ಕಲ್ಯಾಣವಾಗಲಾರದು.

೧೬-೧-೫೮:— ಸಾಧಾರಣವಾಗಿ ನಮ್ಮ ಅಜ್ಞಾನದ ನಿಮಿತ್ತ, ಜನರ ಗುರುತು ಮಾಡಿಕೊಳ್ಳುವದೆಂದರೆ ಕೇವಲ ಬಾಯಿಂದ ಎಂದು ತಿಳಿದಿದ್ದೇವೆ; ಆದರೆ ಕಿವಿ, ಕಣ್ಣು ಮುಂತಾದವುಗಳಿಂದ ಸಹ ಮಾಡಿಕೊಳ್ಳಬಹುದು. ಸನ್ನೆ, ಸಂಜ್ಞೆಗಳಿಂದ ಮಾಡಿಕೊಳ್ಳಬಹುದು. ಸು. ದಿಂದ ಬಂದ ಹುಡುಗಿಯನ್ನು ಹೊರಗೆ ಹೋಗದಂತೆ ಬಂಧನದಲ್ಲಿಟ್ಟರೂ ಸಹ ಅವಳು ಸನ್ನೆ, ಸಂಜ್ಞೆಗಳಿಂದ ಸಂಸ್ಥೆಯ ಇದುರಿನಲ್ಲಿ ಇದ್ದ ಒಬ್ಬ ತರುಣ ಅವಿವಾಹಿತನ ಪರಿಚಯ ಬೆಳೆಸಿದಳು. ಬಹಿರಂಗ ಚಟಗಳು ಬಂಧನದಲ್ಲಿಡುವದರಿಂದ ಕಡಿಮೆಯಾಗುತ್ತವೆ. ಇವು ಹೊರಗಿನಿಂದ ಬಂದವಾದ್ದರಿಂದ ಅವರವರ ಪರಿಸ್ಥಿತಿ ಸ್ವಭಾವಕ್ಕನುಸರಿಸಿ ಬಿಡಲು ಶಕ್ಯ ಆದರೆ ದೇಹಧರ್ಮವನ್ನು ಬಿಡುವದು ಶಕ್ಯವಾಗುವದಿಲ್ಲ. ಹೊರಗಿನ ಚಟ

ಮತ್ತು ದೇಹಧರ್ಮ ಇವೆರಡೂ ಒಂದು ಭ್ರಾಮಕ ಕಲ್ಪನೆ ಹೀಗೆ ಮನಸ್ಸು ಹರಿಯುತ್ತಿರುವಾಗ ಅದನ್ನು ಬಂಧಿಸುವದು ಕಠಿಣವೆಂದು ಲೋಕದಲ್ಲಿ ರೂಢಿ ಯಾಗೀವದು. ಚಟಗಳು ದುಷ್ಪರಿಣಾಮವಾಗದೆ ಬಂಧನದಿಂದ ಬಿಡಬಹುದು. ಆದರೆ ಅಪಾಯವಾಗದೆ ದೇಹಧರ್ಮಕ್ಕೆ ತಡೆಹಾಕುವದು ಶಕ್ಯವಿಲ್ಲ. ಸೃಷ್ಟಿ ನಿಯಮದಂತೆ ಮಕ್ಕಳನ್ನು ಹಡೆಯುವದು ತಪ್ಪಲ್ಲ; ಆದರೂ ಸಹ ಲೋಕ ರೂಢಿಯ ಕೃತ್ರಿಮ ನಿಯಮಕ್ಕನುಸರಿಸಿ ಲಗ್ನವಾಗದ ಮುಂಚೆ ಹೆಣ್ಣು ಮಕ್ಕಳು ಮಕ್ಕಳು ಹಡೆದರೆ ಅವರಿಗೆ ವ್ಯಭಿಚಾರಿ ಎಂಥು ಹೆಸರಿಟ್ಟು ಜಾತಿ ಭ್ರಷ್ಟರನ್ನಾಗಿ ಮಾಡುತ್ತಾರೆ. ಮನೆಯಲ್ಲಿ ಬಾಣಂತಿತನ ಸಹ ಮಾಡುವದಿಲ್ಲ. ಮನೆಯಿಂದ ಹೊರಗೆ ಹಾಕುತ್ತಾರೆ. ಬಂಧನದಲ್ಲಿಡುವದರಿಂದ ಚಹಾ, ಕಾಫಿ ಮುಂತಾದ ಚಟಗಳೇನೋ ಬಿಟ್ಟುಹೋಗುವವು. ದೇಹಧರ್ಮಪ್ರವೃತ್ತಿಯು ಕಡಿಮೆಯಾಗಲಾರದು. ಆ ಹೆಣ್ಣುಮಗಳು, ಆ ಯುವಕನೊಡನೆ ಕಣ್ಣು ಚಿವುಟುವದು, ಸನ್ನೆ ಮಾಡುವದು ಹೀಗೆ ಅವರ ಕಾರಭಾರವು ನಡೆಯು ಹತ್ತಿತು. ಸೃಷ್ಟಿಧರ್ಮ ಹತ್ತಿಕ್ಕಿ ಹೊಡೆಯುವದು ತಪ್ಪು. ಮೊದಲು ಶ್ರೀಮಂತರು ದೈವಾನರೆಂದು ತಿಳಿದು ಬಡವರು ಅವರು ಹೇಳಿದಂತೆ ಕೇಳಿಕೊಂಡಿದ್ದರು. ಆದರೆ ಈಗ ಆ ಶ್ರೀಮಂತರು ಪಾಪಿಗಳೆಂಬ ಕಲ್ಪನೆಯು ಜನರಿಗೆ ಬರಹತ್ತಿದೆ. ಈಗ ಎಲ್ಲರೂ ರಶಿಯಾದ ತತ್ವವನ್ನು ಅನುಸರಿಸಲು ಯತ್ನಿಸುತ್ತಲಿದ್ದಾರೆ.

೧೭-೧-೪೪:— ಆ ಕು ವಿದ್ಯಾರ್ಥಿನಿಯು ತವರ್ಮನೆಗೆಹೋಗು ವದು ಶಕ್ಯವಿಲ್ಲೆಂದು ಕಂಡು ಆ ತರುಣನಕೂಡ ಪರಿಚಯ... ಬೆಳಸಿದಳು ಇದು ಶ್ರೀ. ಭಾ. ಇವರಿಗೆ ಗೊತ್ತಾಯಿತು. ದಿನಾಲು ಅವಳು ರಾತ್ರಿ ಕದ್ದು ಆ ತರುಣನ ಕಡೆಗೆ ಹೋಗುತ್ತಿದ್ದ ಸಂಶಯ ಬಂದದ್ದರಿಂದ ಹೆಚ್ಚಿಗೆ ಬಂದೋಬಸ್ತ ಮಾಡಿ ಬಾಗಿಲುಗಳಿಗೆ ಕೀಲಿ ಹಾಕಹತ್ತಿದ್ದರಿಂದ ಅವಳಿಗೆ ತೊಂದರೆಯಾಗಹತ್ತಿತು. ಈ ಸುದ್ಧಿಯನ್ನು ಶ್ರೀ. ಭಾ. ಇವರು ಒಡೆ ದೀಬಹುದೆಂಬ ಸಂಶಯದಿಂದ ಆ ತರುಣನು ಸಂಸ್ಥೆಯ ಚಾಲಕರಿಗೆ ಒಂದು ಪತ್ರ ಬರೆದು "ಶ್ರೀ. ಭಾ. ಇವರೇ ಆ ವಿದ್ಯಾರ್ಥಿನಿಯ ಪರಿಚಯ ಮಾ

ಕೊಟ್ಟರು ಅವರು ಅವರ ಹೆಂಡತಿಕೂಡಿ ಈ ಕಂತ್ರಾಟಮಾಡಿ ನನ್ನಲ್ಲಿ ರೊಕ್ಕ ಬೇಡುತ್ತಾರೆ. ಅವರಿಬ್ಬರೂ ನೀಚರಿರುತ್ತಾರೆ. ಅವಳನ್ನು ಹೊರಗೆ ಹಾಕಿರಿ" ಎಂದು. ಈ ಪತ್ರವನ್ನು ಶ್ರೀ. ಕೃ. ಇವರು ತಮ್ಮ ಕೈಯಲ್ಲಿ ಹಿಡಿದಿರಲು ಶ್ರೀ. ಭಾ. ಇವರು ಸಿಟ್ಟಿಗೆದ್ದು ಅವರ ಕೈಯೊಳಗಿನಿಂದ ಕಸಿದುಕೊಂಡು ಹೋದರು. ಮತ್ತು ಹರಿದು ಹಾಕಿದರು. ಇದರಿಂದ ಶ್ರೀ. ಮಾ. ಇವರಿಗೆ ಶ್ರೀ. ಕೃ. ಇವರಬಗ್ಗೆ ಸಂಶಯವುಂಟಾಯಿತು. ಮೊದಲೇ ಶ್ರೀ. ಕೃ. ಶ್ರೀ. ಭಾ. ಇವರ ಸಂಬಂಧವಾಗಿ ಹರಡಿದ ಸುದ್ದಿಗಳಿಂದ ತುಂಬಾ ಸಂಶಯುವಿದ್ದ ಪರಿಸ್ಥಿತಿಯಲ್ಲಿ ಆ ತರುಣನ ಪತ್ರವು ಅದಕ್ಕೆ ಹೆಚ್ಚು ಪುಷ್ಟೀಕರಿಸಿತು. ಈ ತೆರನಾದ ನಡತೆಯು ನೀತಿವಿರುದ್ಧವೆಂದು ಶ್ರೀ. ಮಾ. ಇವರ ಮತ.ಇದು ಸ್ವಾಭಾವಿಕವಿದ್ದು ಪರಿಸ್ಥಿತಿಯ ನಿಮಿತ್ತ ಹೆಣ್ಣುಮಕ್ಕಳ ಏಳ್ಗೆಯಲ್ಲಿ, ಅಥವಾ ಸ್ತ್ರೀಯರ ಆಯುಷ್ಯವು ಅಸಹ್ಯವಾಗುವಂತೆ, ದೊಡ್ಡ ಎಡರಾಗಿ ಪರಿಣಮಿಸಿದೆ. ಈ ನೀತಿ ವಿಷಯಕ ಕಂದು ಗಂಡಸರ ಮಾರ್ಗದಲ್ಲಿ ಸೃಷ್ಟಿಧರ್ಮಕ್ಕನುಗುಣವಾಗಿ ಎಡರಾಗಿ ಪರಿಣಮಿಸುವದಿಲ್ಲ. ಇವರಲ್ಲಿ ತಪ್ಪೆಂದು ತಿಳಿದರೆ ಇಬ್ಬರದೂ ತಪ್ಪು. ಆದರೆ ಸ್ತ್ರೀಯ ತಪ್ಪು ಪ್ರತ್ಯಕ್ಷವಾಗಿ ಕಣ್ಣಿಗೆ ಕಾಣುವದರಿಂದ ಅವಳೊಬ್ಬಳೇ ತಪ್ಪುಗಾರಳೆಂದು ಅವಳಿಗೆ ಶಿಕ್ಷೆ ಮಾಡುವದು ತಪ್ಪೆಂದು ಶ್ರೀ. ದಾ. ಇವರ ಮತವಾದ್ದರಿಂದ ಈ ವಿಷಯದಲ್ಲಿ ಶ್ರೀ. ಕೃ. ಇವರೊಡನೆ ಆಪ್ತಾಲೋಚನೆ ಮಾಡಬೇಕಾದ್ದರಿಂದು ಶ್ರೀ. ಮಾ. ಇವರೊಡನೆ ಕ್ಷಣಕ್ಷಣಕ್ಕೆ ವಾಜ್ಯ ಉಂಟಾಗುವಂತಾಯಿತು. ಇಬ್ಬರೂ ತಮ್ಮ ತಮ್ಮ ಸಂಸ್ಕಾರಗಳಂತೆ ನಡೆಯಬೇಕಾಗುವದು ಸ್ವಾಭಾವಿಕ, ಇಬ್ಬರ ಉದ್ದೇಶವು ಒಳ್ಳೆಯದು. ಆದರೆ ಪ್ರತ್ಯಕ್ಷ ಮತಬೇಧ, ವ್ಯಾಜ್ಯ. ಆ ಜಾಣಳಾದ ವಿದ್ಯಾರ್ಥಿನಿಯು ಈ ಒಳಗಿನ ಬೇಧವನ್ನು ಕಂಡುಹಿಡಿದದ್ದರಿಂದ ತನ್ನ ಬುದ್ಧಿಬಲದಿಂದ ಒಬ್ಬರ ವಿರುದ್ಧ ಒಬ್ಬರನ್ನು ಆಡಿಸಿ ತನ್ನ ಲಾಭ ಮಾಡಿಕೊಳ್ಳಬೇಕೆಂದು ಹಂಚಿಕೆ ಹಾಕಿದಳು. ವಿದ್ಯಾರ್ಥಿಗಳು ಮುಂದೇನು ಮಾಡಬೇಕು? ಇದರ ಅರಿವು ಹಿರಿಯರಿಗೆ ತಿಳಿಯಲಿಲ್ಲ. ಆದರ ಲಾಭವನ್ನು ಆ ಜಾಣೆಯಾದ ವಿದ್ಯಾರ್ಥಿನಿಯು ಕೊನೆಯವರೆಗೆ ತೆಗೆದುಕೊಂಡಳು. ಇದೇ ವಿಷಯವು ಸಂಘಕ್ಕೊಂದು ದೊಡ್ಡ ವಿಷಬೀಜವಾಗಿ ಪರಿಣಮಿಸಿತು.

೧೮-೧-೪೮:— ಇಂಥ ಪರಿಸ್ಥಿತಿಯಲ್ಲಿ ಸದ್ಬುದ್ಧಿಗಳ ತಾಕಲಾಟ ವಾಗುತ್ತದೆ. ಎರಡು ಕರ್ತವ್ಯಗಳ ಬಗ್ಗೆ (ಜೊತೆ ಕೆಲಸಗಳ) ತಾಕಲಾಟ ಬಂದಾಗ ಯಾವದನ್ನು ಮಾಡಬೇಕೆನ್ನುವ ಪ್ರಶ್ನೆ ಬಂದು, ಅದನ್ನು ನಿರ್ಧರಿಸುವದು ಕಠಿಣವಾಗುತ್ತದೆ. ಆದ್ದರಿಂದ ಮನುಷ್ಯನು ಕೇವಲ ಭಾವನೆಯನ್ನು ನೋಡಬೇಕು. ಕೆಲವು ವೇಳೆ ಕಲ್ಯಾಣವೆಂದು ಮಾಡಿದ್ದು ಅಕಲ್ಯಾಣವಾಗಿ ಪರಿಣಮಿಸುವದು. ಆದ್ದರಿಂದ ಇದನ್ನೆಲ್ಲ ಬಿಟ್ಟು ನಾವು ಯಾವ ರೀತಿಯಲ್ಲಿ ಒಂದು ಕೆಲಸ ಮಾಡುತ್ತಿರುವೆವೆಂದು ಸಾರಾಸಾರ ವಿಚಾರಮಾಡಿ ಫಲದ ಅಪೇಕ್ಷೆ ಇಲ್ಲದೆ ಕೃತಿ ಮಾಡಬೇಕು. ಇದಕ್ಕೆ "ಅನಾಸಕ್ತಿ ಯೋಗಾಪೇಕ್ಷಾಬುದ್ಧಿ" ಎಂದು ಗೀತದಲ್ಲಾಗಲೀ, ಮ. ಗಾಂಧಿಯವರಾಗಲೀ ಹೇಳಿದ್ದಾರೆ. ಈ ತತ್ವದ ಹೊರತು ಈ ಕೃತ್ರಿಮ ಮಾನವೀ ಜೀವಿತದಲ್ಲಿ ಬೇರೆ ಉಪಾಯವೇ ಇಲ್ಲ. ದಿನಗಳು ಹೋದಂತೆ ಶಾಸ್ತ್ರೀಯ ಶೋಧಗಳು ಹೆಚ್ಚಾದಂತೆ, ಸುಧಾರಣೆ ಹೆಚ್ಚಾದಂತೆ ಜೀವನ ದಲ್ಲಿ ಸೂಕ್ಷ್ಮ ತೊಡಕುಗಳು ಹೆಚ್ಚಾಗುವವು "ಉದ್ಧರೇದಾತ್ಮನಾತ್ಮಾನಂ" ಎಂದು ಗೀತೆಯಲ್ಲಿ ಹೇಳಿದೆ. ತಮ್ಮ ಕಲ್ಯಾಣವನ್ನಾಗಲೀ ಅಕಲ್ಯಾಣ ವನ್ನಾಗಲೀ ತಾವೇ ಮಾಡಿಕೊಳ್ಳುತ್ತಾರೆ. ಮತ್ತೊಬ್ಬರಿಗೆ ಮೋಸ ಮಾಡಿದೆನೆಂದು ಹೆಮ್ಮೆ ಪಡುವವನು ಈಗಲ್ಲದಿದ್ದರೂ ಸಹ ಮುಂದೆ ಯಾವಾಗಾದರೂ ಯಾವದೇ ರೀತಿಯಿಂದ ಮೋಸಹೋಗುವನು. ಸೃಷ್ಟಿ ಧರ್ಮಕ್ಕನುಸಾರವಾಗಿ ನೀತಿನಿಯಮಗಳನ್ನು ಮಾಡಿದೆ. ಇದರಿಂದ ಈಗಿದ್ದ ನಿಯಮಗಳಂತೆ ಗಂಡಸಿನ ವ್ಯಭಿಚಾರವು ಕಂಡುಹಿಡಿಯಲು ಸಾಧ್ಯವಿಲ್ಲದ್ದರಿಂದ ಹೆಣ್ಣುಮಕ್ಕಳ ವ್ಯಭಿಚಾರವು ಸ್ಪಷ್ಟ ಕಾಣುತ್ತಿರುವ ದರಿಂದ ಹೆಣ್ಣುಮಕ್ಕಳ ಆಯುಷ್ಯವು ತೀರ ಹೇಯವಾದದ್ದೂ, ತಿರಸ್ಕರಣೀ ಯವೂ, ದುಃಖಮಯವೂ ಹಾಗೂ ಸಂಕಟಮಯವೂ ಆಗಿದೆ. ಆದರೆ ನಿಜವಾಗಿ ನೋಡಿದರೆ ಇದರಲ್ಲಿ ಇಬ್ಬರದೂ ತಪ್ಪಿಲ್ಲ. ಅಥವಾ ಇಬ್ಬರದೂ ಅಷ್ಟೇ ತಪ್ಪಿರುವದು. ಇಬ್ಬರೂ ಅಷ್ಟೇ ತಪ್ಪು ದಂಡಕ್ಕೆ ಪಾತ್ರರಿರುವರು. ಆದರೆ ಸಮಾಜದಲ್ಲಿ ಹಾಗೆ ಪ್ರತ್ಯಕ್ಷ ಅನುಭವವಿಲ್ಲ ಕೃತ್ರಿಮ ನೀತಿ ನಿಯಮದ ವಿರುದ್ಧ ನಡೆದ ಹೆಣ್ಣುಮಗಳಿಗೆ ಮನೆ. ಮಾರು ಬಿಡಬೇಕಾ ಗುವದು. ದೇಶತ್ಯಾಗ ಮಾಡಬೇಕಾಗುವದು. ಕುಲಭ್ರಷ್ಟ, ಜಾತಿಭ್ರಷ್ಟ

ನೀತಿಭ್ರಷ್ಟ ಲೌಕಿಕ ಭ್ರಷ್ಟಳಾಗುವಳಲ್ಲದೆ ಅನ್ನಾನ್ನಗತಿಕಳೂ ರೋಗ ಗ್ರಸ್ಥಳೂ ಆಗಿ ಕೇವಲ ನರಕಯಾತನೆಯನ್ನನುಭವಿಸ ಬೇಕಾಗುವದು. ಇದೇ ತಪ್ಪು ಮಾಡಿದಗಂಡಸಿಗೆ ಎಲ್ಲ ಶಾಲೆ, ಕಾಲೇಜುಗಳಲ್ಲೂ ಡಿಾವದ ಜ್ಞಾನಗಳಿಸಲು (ಜ್ಞಾನವೇ ಮನುಷ್ಯ ಹಾಗೂ ಪಶುಗಳಲ್ಲಿ ವ್ಯತ್ಯಾಸ ತೋರಿಸುವ ಸಾಧನವಾಗುವದು.) ಅವಕಾಶ. ಹೆಣ್ಣುಮಕ್ಕಳಿಗೆ ಈ ಅವಕಾಶ ವಿಲ್ಲದ್ದರಿಂದ ಅವರು ಪಶುಗಳಾಗಿರುವರೆಂಬ ಮನವಂಕೆ ತೀ. ದಾ. ಇವರಿಗೆ ಆಗಿದ್ದರಿಂದ, ಶ್ರೀ. ಮಾ. ಇವರ ನೀತಿಕಲ್ಪನೆಯು ಬೇರೆಯಾದ್ದರಿಂದ ಆ. ಸು. ವಿ. ಸಲುವಾಗಿ ಏನು ಮಾಡಬೇಕೆಂಬುದಕ್ಕಾಗಿ ವ್ಯಾಜ್ಯ ಯಾವಾಗಲೂ ನಡೆಯುತ್ತಿತ್ತು. ಆ ಹುಡುಗಿಯು ರೂಪದಲ್ಲಿ ಬಹಳ ಚಲುವೆಯಿದ್ದಳು. ದೇಹಧರ್ಮಕ್ಕನುಸರಿಸಿ ಅವಳಲ್ಲಿ ಉಂಟಾದ ವಿಕಾ ರಕ್ಕೆ ಬಂಧನ ಹಾಕುವದಾದರೂ ಹೇಗೆ? ಒಂದು ವೇಳೆ ಅವಳಿಗೆ ವಿದ್ಯೆ ಕಲಿಸಿದರೆ ಮುಂದೆ ಕಲ್ಯಾಣವಾಗುವದೆಂದು ವಿದ್ಯೆ ದೊರಕಿಸಲು ಸಂಧಿ ಕೊಡಬೇಕೆಂಬ ಬಗ್ಗೆ ವಾದ ನಡೆಯಿತು.

೧೯-೧-೪೯:— ಸದ್ಬುದ್ಧಿಯಿಂದ ಸಹ ಬಡಿದಾಟವಾಗುತ್ತಿರುತ್ತವೆ. ಒಳ್ಳೆಯದು ಎಂದು ಮಾಡ ಹೋರಟಾಗ ಕೆಟ್ಟದ್ದೂ, ಕೆಟ್ಟದ್ದೆಂದು ಮಾಡ ಹೊರಟಾಗ ಒಳ್ಳೆಯದೂ ಆಗುವ ಸಂಭವವಿರುತ್ತದೆ. ಇದರಿಂದ ಹೇಗೆ ನಡೆಯಬೇಕೆನ್ನುವದು ತಿಳಿಯುವದಿಲ್ಲ. ಯಾವದೇ ಕಾರ್ಯವು ಸರಿಯಾಗಿ ಸಾಗಬೇಕಾದರೆ ಯೋಗ್ಯತೆಯುಳ್ಳ ಮನುಷ್ಯನ ಏಕತಂತ್ರದಿಂದ ಆಡಳಿತವು ಸಾಗಬೇಕು. ಅಥವಾ ಒಂದೇಧರ್ಮಕ್ಕೆ ಪೋಷಕವಾಗುವಂತೆ ಸಹಕರಿಸು ವಂಥ ಬಹು ಜನರ ತಂತ್ರಕ್ಕೆ ಆಡಳಿತವು ಸೇರಬೇಕು. ಇಲ್ಲವೇಉದಾಸೀನತೆ ಧರಿಸಬೇಕು. ಅಂದರೆ ತಕ್ಕಮಟ್ಟಿಗೆ ಕೆಲಸವಾಗುವದು. ಆದರೆ ಒಳಗಿದ್ದು ಘಾತ ಮಾಡುವದು, ಇಲ್ಲವೆ ವಿಘಾತಕ ದೃಷ್ಟಿಯಿಂದ ಇದಿರಿಸುವದರಿಂದ ಕಾರ್ಯ ನಾಶವಾಗುವದು ಖಂಡಿತ. ಮ. ಗಾಂಧಿಯವರು ಸ್ವತಃ ವಿಚಾರ ಮಾಡಿದ್ದಾರೆ. ಕುಮಾರಪ್ಪ ಪ್ಯಾರೇಲಾಲ ಇವರು ತಾವು ಬೇರೆ ಬೇರೆ ವಿಷಯುಗಳನ್ನು ಕುರಿತು ಮ. ಗಾಂಧಿಯವರೊಡನೆ ವಿಚಾರಮಾಡಿ ಒಬ್ಬರಿ ಗೊಬ್ಬರು ನೆರವಾಗುತ್ತಾರೆ. ಇದರಿಂದ ಅವರು ಮಹತ್ಕಾರ್ಯ ಮಾಡು ತ್ತಿದ್ದು ಆದರಲ್ಲಿ ಮತಭೇಧವಾದಲ್ಲಿ ಅಡ್ಡಿ ಇಲ್ಲ. ನಾಲ್ಕು ಜನ ವಿಚಾರಿ

ಗಳ ವಿಚಾರ ತೆಗೆದುಕೊಂಡು ತಮ್ಮ ಮೊದಲಿನ ವಿಚಾರದಲ್ಲಿ ತಪ್ಪು ಒಪ್ಪ ಗಳಿದ್ದರೆ ತಿದ್ದಿಕೊಂಡು ನಡೆಯಬೇಕು. ಇದರಿಂದ ಒಬ್ಬರಿಗೊಬ್ಬರ ಸ್ನೇಹವು ಬೆಳೆದು ಸಂಘಟನೆಯಾಗುತ್ತದೆ. ತಮಗೆ ವಿಚಾರವಿಲ್ಲದಿದ್ದರೆ ಅಲ್ಲಿ ಯಾರು ವಿಚಾರಿಗಳಿರುವರೋ ಅವರಿಗಾದರೂ ಮರ್ಯಾದೆಯನ್ನ ಕೊಡಬೇಕಾಗುವದು. ಇಲ್ಲಿ ನಮ್ಮ ಸಂಸ್ಥೆಯಲ್ಲಿ ಸಂಘವು ಸ್ಥಾಪನೆಯಾಗಿ ಈಗ ಎರಡು ಮೂರು ವರ್ಷಗಳಾದರೂ ಸಹ ನಿಮ್ಮ ಏಳ್ಗೆಯಾಗಿಲ್ಲ. ಏಕೆ? ಸ್ವತಃ ಯಾರೂ ವಿಚಾರ ಮಾಡುವವರಿಲ್ಲ. ಹೇಳಿದಷ್ಟು ಗ್ರಹಣ ಮಾಡಿ ಕೇಳುವವರೂ ಸಹ ಇಲ್ಲ. ಓದುವವರು ಬೇರೆ ಬೇರೆ ವಿಷಯಗಳ ಗ್ರಂಥಗಳ ಗ್ರಹಣ ಮಾಡಬೇಕು. ಈ ಕೆಲಸವನ್ನು ನಮ್ಮಲ್ಲಿ ಶೀ. ದಾ. ಇವರೊಬ್ಬರೇ ಮಾಡುವದರಿಂದ ಅವರಿಂದಲೇ ಎಲ್ಲರಿಗೂ ವಿಷಯಗಳು ತಿಳಿಯಬೇಕಾಗಿದೆ. ಅದೂ ಎಷ್ಟು ಜನರು ಲಕ್ಷಕೊಟ್ಟು ಕೇಳುತ್ತಾರೆಂದು ಹೇಳುವದು ಕಷ್ಟ ಇದರಿಂದ ಸಂಘಗಳಲ್ಲಿ ಅವ್ಯವಸ್ಥೆಯಾಗ ಹತ್ತಿದೆ.

೨೦–೧–೩೮:— ಯಾವದೇ ಒಂದು ಕಾರ್ಯ ಉತ್ತಮವಾಗಬೇಕೆಂದರೆ ಆ ಕಾರ್ಯವು ಯಾರೇ ಒಬ್ಬರ ಅಧಿಕಾರದಿಂದ ಪರಿಸ್ಥಿತಿಯ ಮೂಲಕವಾಗಲೀ, ರೊಕ್ಕದ ಬಲದಿಂದಾಗಲೀ ನಡೆಯಬೇಕಾಗುವದು. ಇಲ್ಲವೆ ತಮ್ಮ ತಮ್ಮ ಮತಭೇಧಗಳಿಗನುಗುಣವಾಗಿ ಬೇರೆ ಬೇರೆ ಶಾಖೆ ಹೊರಡಿ ಸರಕಾರ ಮಾಡಿರುವ ಕೆಲಸವನ್ನು ಮಾಡಿದರೆ ಮತ್ತು ಅದಕ್ಕೆ ವಿರೋಧವನ್ನು ಯಾರೂ ಮಾಡದಿದ್ದರೆ ಕೆಲಸವು ನಡೆಯಬಹುದು, ಎಲ್ಲರ ಮತವು ಒಂದೇ ಆದರೆ ಕಾರ್ಯವು ಸರಿಯಾಗಿ ನಡೆಯಬಹುದು. ಅಥವಾ ಕೆಲಸಗಾರರ ಮತಬೇಧವಿದ್ದರೂ ಸಹ ಅವರುಗಳ ಗುರಿ ಒಂದೇ ಇದ್ದರೆ ಆ ಕಾರ್ಯವು ಬಡಿದಾಟವಾಗುತ್ತಲಿದ್ದರೂ ನಡೆಯುವದು. ಆದರೆ ಮತಬೇಧದಂತೆ ಗುರಿಯಲ್ಲೂ ವ್ಯತ್ಯಾಸವಿದ್ದು ಅಥವಾ ಹೊಟ್ಟೆಕಿಚ್ಚು ದ್ವೇಷ ಇವುಗಳಿದ್ದಲ್ಲಿ ಆ ಕೆಲಸ ಸಾಗುವದಿಲ್ಲ. ಈಗ ಕೇವಲ ಶೀ. ದಾ. ಇವರು ತಿಳಿಸಿಕೊಂಡು ಹೇಳುವರು. ಮಾತ್ರ ಆದರೆ ಸಂಸ್ಥೆಗೆ ವೆಚ್ಚಕಾಗಿ ರೊಕ್ಕ ತರಲು ಬೇರೆ ಬೇರೆಯವರಾಗಬೇಕು. ಶೀ. ದಾ. ಇವರು ಬೇರೆ ಬೇರೆ ವಿಷಯಗಳ ಅಭ್ಯಾಸಮಾಡಿ ಬೇರೆ ಬೇರೆ ದೇಶಗಳ ಹೆಣ್ಣುಮಕ್ಕಳ ಸ್ಥಿತಿಗತಿಗಳನ್ನು ತಿರುವದರಿಂದ ಅವರ ತೊಡಕುಗಳನ್ನು ಬಿಡಿಸುವ ವಿಷಯಗಳನ್ನು ಹೇಳ

ಬಾಕಿಯುವರಿಗೆ ವಿಚಾರ ಕೊಡುವ ಅವಶ್ಯಕತೆ ಇರುವಂತೆ, ಅವರು ಹೇಳಿದಂತೆ ಮಾಡಲು ಸಹಕಾರಿಗಳು ಬೇಕು. ಇಲ್ಲವೆ ಕೆಲಸಗಾರರು ಬೇಕು. ಕೆಲಸಮಾಡಲು ಚಟುವಟಿಕೆಯುಳ್ಳವರನ್ನು ಕೈಕಾಲು ಕಟ್ಟಿಕೊಂಡಾದರೂ ಇವರು ಅವರ ಕಡೆಯಿಂದ ಕೆಲಸ ತೆಗೆದುಕೊಳ್ಳಲು ಪ್ರಯತ್ನಿಸುತ್ತಾರೆ. ಇದರಲ್ಲಿ ಮಾ. ಮಾ. ಮತ್ತು ತೀ. ದಾ. ಇವರಿಗೆ ಈ ವಿಷಯಗಳಲ್ಲಿ ಎಷ್ಟೋ ವೇಳೆ ಮತಭೇದವಾಗುತ್ತಿರುತ್ತದೆ. ಆದರೂ ಉದ್ದೇಶದಲ್ಲಿ ಮತಭೇದವಿಲ್ಲದ್ದರಿಂದ ಇಷ್ಟಾದರೂ ಕೆಲಸ ನಡೆದಿದೆ. ಇಡೀ ಕರ್ನಾಟಕದ ಭಾಗದಿಂದ ಕೇವಲ ೪೦–೫೦ ಜನ ವಿದ್ಯಾರ್ಥಿನಿಯರು ಮಾತ್ರ ಸಂಸ್ಥೆಯಲ್ಲಿ ಬಂದಿದ್ದು ಇವರೆಲ್ಲರು ಸಂಸ್ಥೆಯ ಸಹಾಯದಿಂದಲೇ ಬದುಕಿರುವರೆಂದು ಹೇಳಬರುವದಿಲ್ಲ. ಆದರೂ ಸಹ ಇಲ್ಲಿರುವವರು ತಮಗೆ ತಮ್ಮ ಯಾವ ಪರಿಸ್ಥಿತಿಯಲ್ಲಿ ಈ ಸಂಸ್ಥೆಯು ನೆರವಾಗಿದೆ ಎನ್ನುವದನ್ನು ವಿಚಾರ ಮಾಡಿಕೊಂಡು ತಾವಾಗಿಯೇ ಸಂಸ್ಥೆಯ ಕೆಲಸಕ್ಕೆ ನೆರವಾಗಬೇಕು.

೨೧–೧–೪೪:— ಸಹಕಾರವೆಂದರೇನು? ಅಸಹಕಾರವೆಂದರೇನು? ಒಂಗಿಂದೊಳಗಿನ ಬಡಿದಾಟದಿಂದ ಸಹ ಒಬ್ಬರಿಗೊಬ್ಬರಿಗೆ ಸಹಾಯ ಹೇಗೆ ಆಗುತ್ತದೆ? ಬಡಿದಾಡುವಾಗ ಸಹ ವೈರಿಯಲ್ಲಿಯ ಸಹಾಯಕ ವಿಘಾತಕ ಗುಣಗಳಾವು ಎಂಬುದನ್ನು ಕಂಡಕೊಳ್ಳಬೇಕು. ಮ. ಗಾಂಧಿಯವರು ಹೇಳುವದೇನೆಂದರೆ, "ಇಂಗ್ಲೀಷರು ಕೆಟ್ಟವರಲ್ಲ. ಆದರೆ ಅವರ ಪದ್ಧತಿ ಕೆಟ್ಟದ್ದಿದೆ" ಎಂದು. ನ್ಯಾಯಾಧೀಶನು ಕೆಟ್ಟವನಲ್ಲದಿದ್ದರೂ ಸಹ ಕಾಯ್ದೆಗನುಸರಿಸಿ, ತಪ್ಪುಗಾರರೆಂದು ಬಂದವರಿಗೆ ಶಿಕ್ಷೆಮಾಡ ಬೇಕಾಗುವದು. ಮೋಟಾರು ಹೋಗುತ್ತಿರುವಾಗ ಒಂದು ಮಗುವು ಅಡ್ಡ ಬಂದು ಅದರಲ್ಲಿ ಸಿಕ್ಕರೆ ಅದು ಯಾರ ತಪ್ಪು, ಹಾರ್ನ ಮಾಡಿ ಸಿಧಾನದಿಂದ, ಎಚ್ಚರಿಕೆಯಿಂದ ಮೋಟಾರು ಸಾಗಿಸುತ್ತಿರಲು ಆಕಸ್ಮಿಕವಾಗಿ ಮಗು ಅಡ್ಡ ಬಂದಲ್ಲಿ ಮಗುವಿನ ತಪ್ಪು ಮನಬಂದಂತೆ ವೇಗದಿಂದ ಊರಲ್ಲಿ ಮೋಟಾರು ನಡೆಸಿದಲ್ಲಿ ಹಾರ್ನ ಮಾಡದಿದ್ದಲ್ಲಿ ಆ ಡ್ರಾಯವ್ಹರನ ತಪ್ಪು, ಇದೆಲ್ಲ ಸಾಕ್ಷಿ ಪುರಾವೆಗಳಿಂದ ಸಿದ್ಧಮಾಡತಕ್ಕ ಸಂಗತಿ. ಆದರೆ ಪೋಲೀಸ ಅಧಿಕಾರಿಗಳು ನ್ಯಾಯಾಧೀಶರು, ಲಂಚ ತಿಂದು ಅಥವಾ ಬೇಕಾದವರು, ಬೇಡಾದವರು,

ಉದಾಸೀನರು, ರೊಕ್ಕದ ಬಲವುಳ್ಳವರು, ಬುದ್ಧಿವಂತ ವಕೀಲರು ಇವ
ಮೇಲೆ ಇದರ ನಿರ್ಣಯವು ಅವಲಂಬಿಸಿರುವದು. ಆದ್ದರಿಂದ ಮನುಷ್ಯ
ಕಟ್ಟಳೆಗಳು ಸದೋಷವಿದ್ದು ಅವುಗಳು ಅಧಿಕಾರಿಯನ್ನವಲಂಬಿಸಿರುವವು
ಮೊನ್ನೆ ದಿಲ್ಲಿಯಲ್ಲಿ ಪಂ. ನೆಹರೂ ಇವರು ಮೋಟಾರಿನಲ್ಲಿ ಹೋಗುತ್ತಿ
ವಾಗ ಒಂದು ಕೂಸು ಅಡ್ಡ ಸಿಕ್ಕು ಸತ್ತಿತು. ಕೂಡಲೇ ಅವರು ಕೆಳಗಿಳಿ
ಮಗುವನ್ನು ಕಾರಿನಲ್ಲಿ ಹಾಕಿಕೊಂಡು ಹೋಗಿ ತಮ್ಮ ತಪ್ಪನ್ನು ತಿ
ಹೇಳಿದರು. ಇಡೀ ಹಿಂದುಸ್ತಾನದ ಮಂತ್ರಿಯೊಬ್ಬನು ತನ್ನ ತಪ್ಪಿಗಾಗಿ ಕ್ಷ
ಬೇಡುವಾಗ ಯಾರು ಏನು ಮಾಡಲು ಸಾಧ್ಯ? ತನ್ನ ತಪ್ಪನ್ನು ಒ
ಕೊಂಡು ನಡೆದಲ್ಲಿ ಕ್ಷಮೆ ಮಾಡಲಿಕ್ಕೆ ಅಲ್ಪಸ್ವಲ್ಪವಾದರೂ ಹಾದಿ ಉಳಿ
ವದು. ಅದು ಬಿಟ್ಟು "ಎಲ್ಲರೂ ತಪ್ಪು ಮಾಡುವವರೇ" ಎಂದು ಜೋ
ರಿಂದ ಮಾತಾಡಿ, ತಾವು ತಪ್ಪುಮಾಡಿದರೆ ತಪ್ಪೇನು ಎಂದು ತಿಳಿದು ತ
ಗಳನ್ನು ಬೆಳೆಸುವದು, ಶುದ್ಧ ಆತ್ಮಘಾತವೆ ಸರಿ. ಶ್ರೀ. ಮಾ. ಇವ
ಸ. ಝುಕ್ಕೆ ಯಾವದೇ ಹೆಣ್ಣುಮಗಳು ಸಣ್ಣ ಕೂಸನ್ನು ಕರೆದುಕೊಂ
ಬಂದರೆ ಮೊದಲು ಇವರಿಗೆ ಅವಳನ್ನು ನೋಡಿ ಮನಸ್ಸು ಕರಗುತ್ತ
ಆದರೆ ಈ ಪಾಪ ಕೃತಿಯನ್ನೇಕೆ ಮಾಡಿದಳೆಂದು ಅದೇ ವೇಳೆಗೆ ಆ ಹೆ
ಮಗಳ ಮೇಲೆ ಸಿಟ್ಟಾಗಿ ಅವಳನ್ನು ಒಳಗೆ ಕರೆದುಕೊಳ್ಳಲು ನಿರಾಕರಿಸ
ಬಹುದು. ಅವರ ಸ್ವಭಾವವು ಹೀಗಿರುವದರಿಂದ ಎಷ್ಟೋ ವೇಳೆ ಇಲ್ಲಿ
ಹುಡುಗಿಯರನ್ನು, ತಮ್ಮ ತಪ್ಪಿನ ಕಲ್ಪನೆಯು ಮೂಲಕ, ಸಿಕ್ಕಂತೆ ಬಯ
ಒಂದೆರಡುಗಳಿಗೆಯನಂತರ ಅವರನ್ನು ಅಪ್ಪಿಕೊಳ್ಳುವ ರೂಢಿಯು ಅ
ಗುಣದಲ್ಲಿದೆ, ಅದಕ್ಕೆ ಕಾರಣವೇನಂದರೆ ತಪ್ಪು ಪದ್ಧತಿಯ ದೋಷಗಳ
ವ್ಯಕ್ತಿಯಮೇಲೆ ಹಾಕಲು ನಮ್ಮ ಸಂಸ್ಕಾರಗಳು ನಮಗೆ ಕಲಿಸುತ್ತ
ಎರಡನ್ನೂ ಸಂಪೂರ್ಣವಾಗಿ ವಿಂಗಡಿಸುವ ಕೆಲಸ ಸುಲಭವಿಲ್ಲ. ಯಾವ
ಸಂಗತಿ ಒದಗಿದಾಗ ನಾವು ನಿರ್ಲಿಪ್ತರಾಗಿ ತಾಳ್ಮೆಯಿಂದ ಶಾಂತ
ಯಾಗಿ ವಿಚಾರ ಮಾಡಿ ನೋಡಿ, ವಿಂಗಡಿಸುವ ರೂಢಿ ಇಟ್ಟಲ್ಲಿ ತಪ್ಪು
ಕಡಿಮೆಯಾಗುವವು. ಇಲ್ಲವೆ ಪೂರ್ವಗ್ರಹ ದೂಷಿತ ಕಲ್ಪನೆಗಳ ಮೂ
ಎಲ್ಲವೂ ವಿಕೃತವಾಗುವವು.

೨೨—೧—೪೪:— ಯಾವದೇ ಒಂದು ಕಾರ್ಯವಾಗಬೇಕಾದರೆ, ಒಬ್ಬರಿಗೊಬ್ಬರ ಸ್ವಭಾವದಲ್ಲಿ ಯಾವರೀತಿಯಿಂದ ಸಹಕಾರವನ್ನು ಮಾಡಬೇಕೆನ್ನುವದರಲ್ಲಿ ತಾಕಲಾಟವಾಗುತ್ತಿರುತ್ತದೆ. ಸಂಸ್ಕಾರಗಳು ಒಂದೇಸವನೆ ಮಿಡುಳಿಸ ಮೇಲಾಗುತ್ತಿರುತ್ತವೆ. ಅವು ಸಣ್ಣಂದಿನಿಂದ ನಡೆಧದ್ದರಿಂದ ಅವುಗಳನ್ನು ಬಿಡುವದು ತ್ರಾಸಾಗುತ್ತದೆ. ಹಾಗೂ ಹೇಗೆ ಬಿಡಬೇಕೆನ್ನುವದು ತಿಳಿಯದಾಗುತ್ತದೆ. ಈ ಪ್ರಕಾರವಾಗಿ ಮಾ. ಮಾ. ಇವರಿಗೆ ತಮ್ಮ ಸಂಸ್ಕಾರಗಳನ್ನು ಬಿಡಲು ಬಹಳ ತ್ರಾಸಾಗುತ್ತಿತ್ತು. ಸಮಯ ಬಂದಾಗ ಒಳ್ಳೇ ಕಾರ್ಯಕ್ಕಾಗಿ ಸುಳ್ಳಾಡಬೇಕಾದರೆ ಸಹ ಅವರ ಜೀವದಸುತ್ತು ಬರುವದು. ಅದರಿಂದಲೇ ಅವರು ಒಳ್ಳೆಯ ಕಾರ್ಯವಾಗಬೇಕಾದರೆ ಸುಳ್ಳಾಡಿಯೇ ತೀರಬೇಕಾದ ಪ್ರಸಂಗ ಬಂದಾಗ ಏನು ಮಾಡಬೇಕೆನ್ನುವದು ತಿಳಿಯದೆ ಚಿಕ್ಕಾಟದಲ್ಲಿ ತೊಳಲುತ್ತಿರುತ್ತಾರೆ. ಮ. ಗಾಂಧಿಯವರು ಪ್ರಯೋಗವೆಂದು ಮಾಂಸ ತಿಂದರು. ಆದರೆ ಅದಕ್ಕೆ ಬಲಿಬೀಳಲಿಲ್ಲ. ಕಾರ್ಯದ ಪ್ರಯೋಗ ಮಾಡುವವರಿಗೆ ಪ್ರಯೋಗಮಾಡುವಾಗ ದುಃಖವೆನಿಸಬಹುದು. ಆದರೆ ಪ್ರಯೋಗ ಮಾಡಿದ ಮೇಲೆ ಅದರಲ್ಲಿ ಸುಖಸಿಗಬಹುದು. ವ್ಯಸನಿಗಳು ಎಂದೂ ಪ್ರಯೋಗಮಾಡಲು ಹೋಗುವದಿಲ್ಲ. ಆದರೆ ಹೊಸವ್ಯಸನ ಹಚ್ಚಿಕೊಳ್ಳಲು ಮಾತ್ರ ಹೋಗುತ್ತಾರೆ. ಉಪವಾಸವನ್ನು ಮಾಡಿದಾಗ ಬೇರೆ ಬೇರೆ ವಿಕಾರಗಳಾಗುತ್ತಿರುತ್ತವೆ. ಆದರೆ ಉಪವಾಸದ ಮಹತ್ವವನ್ನು ಅಂತು ಉಪವಾಸ ಕೈಕೊಂಡರೆ ಆ ವೇಳೆಯಲ್ಲಾದ ವಿಕಾರಗಳಿಗಾಗಿ ಹೆದರಬೇಕಾಗಿಲ್ಲ. ಆ ವಿಕಾರಗಳು ಆಗುವದರಿಂದ ದೇಹಕ್ಕೆ ಏನೂ ಕೆಡಕಾಗುವದಿಲ್ಲ. ಡಾ. ಮ್ಯಾಕಫೆಡನ್ನರು "ಉಪವಾಸ ಮಾಡಿದಾಗ ದೇಹದಲ್ಲಿ ನಮ್ಮ ಆಹಾರವಿಹಾರಗಳಲ್ಲಿಯ ತಪ್ಪುಗಳಿಂದ ಕೂಡಿಬಿದ್ದ ವಿಜಾತಿಯ ದ್ರವ್ಯವು ಹೊರಬಿದ್ದು ದೇಹವು ಹೆಚ್ಚು ನಿರೋಗಿ ಯಾಗುವದೆಂ"ಬ ತತ್ವವನ್ನು ಪ್ರಯೋಗ ಮಾಡಿ ಸಿದ್ಧ ಮಾಡುವ ವರೆಗೆ, 'ಉಪವಾಸದಿಂದ ಪಿತ್ತವೇಳುತ್ತದೆ, ಉಪವಾಸ ಮಾಡಿದವರು ಪುಣ್ಯವಂತರು. ಅವರಿಗೆ ದೇವರು ಮೆಚ್ಚುತ್ತಾನೆ. ಇವೇ ಮೂಢಕಲ್ಪನೆಗಳಿದ್ದವು. ಹೊಸ ಹೊಸ ಪ್ರಯೋಗಗಳನ್ನು ಮಾಡಿ ನಿಜಸಂಗತಿ ಕಂಡುಹಿಡಿಯಲು ಹಳೇ ಮೂಢ ... ಯಾವ ವಿಷಯಕ್ಕಾಗಿ ರೂಢ ಕಲ್ಪನೆಗಳೇ ಇದ್ದು ಬರುತ್ತವೆ.

ತಮ್ಮ ಮನವರಿಕೆಯಾಗುತ್ತದೆ ಅದಕ್ಕಾಗಿ ಬುಂಗಗಳಲ್ಲಿ ಎಷ್ಟೇ ಎಡರು ತೊಡರು ಬಂದರೂ, ಎಷ್ಟೇ ಉಕ್ಸಾನವಾದರೂ, ನಿಂದಾಸ್ತುತಿಗಳನ್ನು ಸಹಿಸಬೇಕಾದರೂ ಅಡ್ಡಿಯಿಲ್ಲೆಂಬ ದೃಢ ವಿಶ್ವಾಸದಿಂದ ಪ್ರಯೋಗಗಳನ್ನು ಮಾಡಿ ಆದರಲಾಭದ ಮನವರಿಕೆಯನ್ನು ಜನರಿಗೆ ಮಾಡಿಕೊಡಬೇಕಾಗುತ್ತದೆ. ಏಕೆಂದರೆ ಬದಲಾಗುತ್ತಿರುವ ಈ ಪ್ರಪಂಚದಲ್ಲಿ ಪರಿಸ್ಥಿತಿಗನುಸಾರವಾಗಿದ್ದ ಯಾವ ಉತ್ತಮ ಸಂಸ್ಕಾರವೂ ಶಾಶ್ವತವಾಗಿ ಕಲ್ಯಾಣ ಮಾಡಲಾರದು.

೩೩-೧-೪೮:— ಈ ಕೃತ್ರಿಮ ಆಯುಷ್ಯದಲ್ಲಿ ಈ ಉಪವಾಸದ ಪ್ರಯೋಗದಿಂದ ಹೇಗೆ ಲಾಭವಾಗುತ್ತದೆ ಎಂಬುದನ್ನು ಕಂಡುಹಿಡಿಯುವದು ಬಹಳ ಅಗತ್ಯವಿರುತ್ತದೆ. ಮೊದಲು ಕೆಟ್ಟ ಚಟಗಳು ಹತ್ತಿದಮೇಲೆ ಅದನ್ನು ಬಿಡುವದು ಕಠಿಣವಾಗುತ್ತದೆ. ತಾತ್ಕಾಲಿಕವಾಗಿ ಉಪಯೋಗವಾಗುವದೆಂದು ಯಾವದಾದರೂ ನಿಯಮ ಮಾಡಿದರೆ ಅದನ್ನು ತಿರುಗಿ ಬದಲು ಮಾಡಬಹುದೆಂದು ಎಲ್ಲರೂ ಒಪ್ಪಿದ್ದಾರೆ. ಆದರೆ ಹೆಣ್ಣುಮಕ್ಕಳ ನೀತಿ ನಿಯಮದ ಬಗ್ಗೆ ಇನ್ನೂ ಈ ತತ್ವ ಒಪ್ಪಿಗೆಯಾಗಿಲ್ಲ. ಇವೆಲ್ಲವೂ ಕೇವಲ ಗಂಡಸಿನ ಸುಖಕ್ಕಾಗಿ, ಹೆಣ್ಣುಮಕ್ಕಳ ಮೋಹಕ್ಕೆ ಗಂಡೂ, ಗಂಡಸಿನ ಮೊಹಕ್ಕೆ ಹೆಣ್ಣೂ ಬಲಿಬೀಳುತ್ತದೆ. ಇದಕ್ಕೆಲ್ಲ ಪರಿಸ್ಥಿತಿಯೇ ಕಾರಣವಾಗಿದೆ. ಇವೆಲ್ಲ ಕೃತ್ರಿಮ ಆಯುಷ್ಯ, ಮನಸ್ಸು ಎಷ್ಟು ಜೋಡಿ ಇದೆ, ಏತಕ್ಕಾಗಿ ಇಷ್ಟು ಹೊಯ್ದಾಡುತ್ತದೆ ಎಂಬುದನ್ನು ವಿಚಾರಮಾಡಿ ಮನಸ್ಸಿನ ಅಭ್ಯಾಸ ಮಾಡಿದಲ್ಲಿ ಮನೋಬಲ ಬೆಳೆಯುವದು. ಎಷ್ಟೊ ಮಾನಸ ಶಾಸ್ತ್ರಜ್ಞರು ಇದರ ಪ್ರಯೋಗಕ್ಕಾಗಿ ಬೇರೆಯವರ ಮನಸ್ಸನ್ನು ತಿಳಿಯಲು ಅವರೊಡನೆ ಸ್ನೇಹ ಬೆಳೆಸಿದ್ದಾರೆ. ಅವರ ಅನೀತಿ ವರ್ತನದಿಂದ ಯಾವಾವ ಕೆಟ್ಟ ಹಾಗೂ ಒಳ್ಳೆಯ ಪರಿಣಾಮವಾಗುತ್ತವೆಂಬದನ್ನು ಕಂಡು ಹಿಡಿಯಲು ಯತ್ನಿಸಿದ್ದಾರೆ. ಒಮ್ಮೆ ಒಬ್ಬ ರೋಗಿ ಗಂಡಸು ಒಬ್ಬ ಸಂಭಾವಿತ ಹೆಣ್ಣು ಮಗಳನ್ನು ಬಲತ್ಕಾರದಿಂದ ಕೆಡಿಸಿದ್ದರಿಂದ ಅವಳು ಸಿಟ್ಟಿಗೆದ್ದು, ಗಂಡಸರ ಜಾತಿಯೇ ನೀಚವಿರುವದರಿಂದ ಅವರೆಲ್ಲರನ್ನು ರೋಗಕ್ಕೆ ಬಲಿಮಾಡಬೇಕೆಂಬ ಹಟತೊಟ್ಟು ಅವನಿಂದ ಹತ್ತಿದ ರೋಗವನ್ನು ಗಂಡಸರ ವಂಶಕ್ಕೇ ಹತ್ತಿಸಲು ವೇಶ್ಯಾವೃತ್ತಿಯನ್ನು ಆರಂಭಿಸಿದಳೆಂದು ಹೇಳುತ್ತಾರೆ.

ಮೂಕ ಪ್ರಾಣಿಗಳು ತಮಗೆ ಕಾಲಕ್ಕನುಸರಿಸಿ ಗಂಡುಗಳನ್ನು ಕೂಡಿಕೊಳ್ಳುತ್ತವೆ. ನಂತರ ಅವುಗಳನ್ನು ಹತ್ತಿರ ಬರಗೊಡುವದಿಲ್ಲ. ಇದರ ಮೇಲಿಂದ ಮಾನವರಿಗಾದರೂ ಗಂಡು-ಹೆಣ್ಣಿನ ವಿಷಯಕ್ಕೆ ಇದೇ ನಿಯಮವಿರುವದೆಂದು ತಿಳಿದು ಬರುತ್ತದೆ. ಉಪವಾಸದ ಪ್ರಯೋಗದಲ್ಲಿ ಎಷ್ಟು ಮಹತ್ವದ ಶೋಧಗಳು ಕಂಡುಬಂದಿವೆಯೋ ಹಾಗೆ ಸ್ತ್ರೀ-ಪುರುಷರ ವಿಷಯದಲ್ಲಿ ಕೂಡ ಅನೇಕ ಮಹಾನುಭಾವರು ಪ್ರಯೋಗಗಳನ್ನು ಮಾಡಿ ಈ ನೀತಿನಿಯಮಗಳಲ್ಲಿಯ ಕೊಳೆಯನ್ನು ಕಂಡುಹಿಡಿದು ಎಷ್ಟೋ ಮಹತ್ವದ ಶೋಧಗಳನ್ನು ಕಂಡ ಹಿಡಿದಿದ್ದಾರೆ. ಸ್ತ್ರೀ ಸ್ವಾತಂತ್ರ್ಯವೆಂದರೇನು? ಅದರಲ್ಲಿಯ ದೋಷಗಳಾವವು? ಕೃತ್ರಿಮ ಸಂಸ್ಕಾರಗಳ ಮೂಲಕ ಅವರ ಮೇಲೆ ಆರೋಪಿಸಲ್ಪಡುವ ಆರೋಪಗಳಾವವು? ಇವುಗಳ ಬಗ್ಗೆ ವಿಚಾರಮಾಡಿ ನಿರ್ಧರಿಸತಕ್ಕದ್ದು ಬಹಳವಿವೆ.

೨೪-೧-೪೮ ಸಾಧಾರಣವಾಗಿ ಈ ಕೃತ್ರಿಮ ಆಯುಷ್ಯದಲ್ಲಿ ಮನುಷ್ಯನ ಹಾನಿಯಾಗುವದಕ್ಕೆ ಮೂರೂ ಕಾಲಗಳ ವಿಚಾರಮಾಡಿ ಒಂದಕ್ಕೊಂದರ ಸಂಬಂಧ ನೋಡಿಸರೂ ಅಲ್ಲಿ ಕಾಣುವದೆಂದರೆ ಮನುಷ್ಯ ತಾರತಮ್ಯದ ವಿಚಾರ ಮಾಡುವದಿಲ್ಲ, ಮತ್ತು ಸ್ವತಂತ್ರ ವಿಚಾರ ಮಾಡುವದಿಲ್ಲ, ವಿಚಾರ ಮಾಡಲು ಅನುಕೂಲವಿದ್ದಾಗ, ಬೇರೆ ಕೆಲಸಕ್ಕೆ, ಆ ಸಂದರ್ಭದ ಸುಸಂಧಿಯನ್ನು ಕಳೆದುಕೊಳ್ಳಲು ಎತ್ನಿಸುತ್ತಾನೆ ಎಂದು. ಕೇವಲ ಅಪರಿಹಾರ್ಯದ ಪರಿಸ್ಥಿತಿ ಬಿಟ್ಟು ಸುಮ್ಮಸುಮ್ಮನೆ ಆ ವಿಚಾರಗಳು ಬಂದಾಗ ಆ ಸುಸಂಧಿ ಕಳೆದುಕೊಂಡರೆ ತನ್ನ ಹಾನಿಯಾಗುವದೆಂಬುದು ಗೊತ್ತಾಗುವದಿಲ್ಲ.

ಸು. ಹುಡುಗಿ ಈ ವಿಷಯದಲ್ಲಿ ಚತುರಳಿದ್ದಳು. ಅವಳು ತನ್ನನ್ನು ಕರೆದುಕೊಂಡು ಹೋಗುವದಿಲ್ಲೆಂದು ಯಾವಾಗ ತಿಳಿದುಕೊಂಡಳೋ ಆವಾಗ ಅವಳು ಇಲ್ಲಿ ಯಾರ್‍ಯಾರ ಒಲವು ಹೇಗಿದೆ ಎನ್ನುವದನ್ನು ತಿಳಿದುಕೊಂಡು ಎಲ್ಲರ ಮರ್ಜಿಯನ್ನು ಸಂಪಾದಿಸಹತ್ತಿದಳು. ಶ್ರೀ. ಶೀ. ದಾ. ಶ್ರೀ. ಕೃ. ಕ. ಶ್ರೀ. ಮಾ. ಮಾ. ಇವರೆಲ್ಲರಿಗೂ ಅವರವರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಮಾತಾಡುವದು ಮತ್ತು ಅದರಂತೆ ಕೃತಿ

ಯಾದರೂ ಮಾಡುವದು ಹಿಗೆಯೇ ನಟಿಸಹತ್ತಿದಳು. ಏನೇ ಮಾಡಿದರೂ ವಿದ್ಯದ ಗುರಿಯನ್ನು ಬಿಡುವ ಹಾಗಿಲ್ಲೆಂದು ನಿಶ್ಚಯಿಸಿ ನಡೆದಳು. ಯಾರೇ ಸ್ವಾರ್ಥದ ಗುರಿಇಟ್ಟು ಹೀಗೆ ಮಾಡಹತ್ತಿದರೆ ಮುಂದೆಂದಾದರೂ ಅದು ಹೊರಬೀಳುವದು. ನಿಜವಾಗಿ ಅವರು ಪುನಃ ಪೂರ್ವಕವಾಗಿ ಆ ಧೋರಣೆಯನ್ನೇ ಇಟ್ಟುಕೊಂಡು ಕೆಲಸಕ್ಕೆ ಹೊರಟರೆ ಮುಂದಿನ ಕಾರ್ಯವು ಸರಳವಾಗಿ ಸಾಗುವದು. ಸ್ವಾರ್ಥ, ಪರಮಾರ್ಥ ಈ ಎರಡೂ ಗುರಿಯಿಟ್ಟು, ಪರಮಾರ್ಥಕ್ಕೆ ಹಾನಿ ತಟ್ಟಿದಾಗ ಸ್ವಾರ್ಥ ಬಿಡುವದು ಉತ್ತಮರ ಸ್ವಭಾವವು ಆದರೆ ಪರಮಾರ್ಥಕ್ಕೆ ಹಾನಿ ತಟ್ಟಿದಾಗ ಸಾರ್ಥ ಸಾಧಿಸಿದರೆ ಅದು ಮಧ್ಯಮ ತರಗತಿಯದ್ದಾಗುವದು, ಎರಡೂ ಬಿಟ್ಟು ಸ್ವಾರ್ಥ ಪರಮಾರ್ಥ ಎರಡೂ ಕೆಡುವಂತೆ ದುಷ್ಟ ಧೋರಣೆಯನ್ನಿಡುವದು ಆತ್ಮ ಘಾತಕವೇ ಸರಿ. ಈ ಸ್ವಭಾವಕ್ಕೆ ಅಧಮ ಸ್ವಭಾವವೆನ್ನಬೇಕು. ಇದನ್ನೆಲ್ಲ ಚೆನ್ನಾಗಿ ಅರಿತುಕೊಂಡು, ಯಾವಾಗ ಉತ್ತಮ ಸಂಧಿ ಬರುವದೆಂಬುದರ ದಾರಿ ಕಾಯ್ದು ಸಂಧಿ ಸಿಕ್ಕಕೂಡಲೇ ಅದರ ಉಪಯೋಗ ಮಾಡಿಕೊಳ್ಳಬೇಕು. ಆಯುಷ್ಯದಲ್ಲಿ ಅನುಕೂಲ ಸಂಧಿಯು ಬರುವದು ತಡವಿದೆ. ಬಂದಾಗ ಅದರ ಉಪಯೋಗ ಮಾಡಿಕೊಳ್ಳದಿದ್ದರೆ ತಪ್ಪು ನಮ್ಮದೇ ಸರಿ. ಆ. ಸು. ಹು. ಇಂಥ ಸಂಧಿಗಳನ್ನು ಸಾಧಿಸುವದರಲ್ಲಿ ಒಳ್ಳೇ ಜಾಣೆ. ಆದರೆ ಅವಳ ಗುರಿ ಸರಿಯಾಗಿಲ್ಲದ್ದರಿಂದ ಬಹಳ ನಷ್ಟಕ್ಕೆ ಗುರಿಯಾದಳು.

೨೫–೧–೪೪:— ಯಾವ ಯಾವ ವೇಳೆಗಳಲ್ಲಿ ಯಾವ ಯಾವ ಕೆಲಸ ಮಾಡಬೇಕು? ಯಾವ ರೀತಿ ನಡೆಯಬೇಕು? ಎನ್ನುವದನ್ನು ವಿಚಾ[illegible] ಮಾಡಿ ನಡೆದರೆ ನಮ್ಮ ಮುಂದಿನ ಹಾದಿಯು ಸರಳವಾಗುವದು. ಆ ಹುಡುಗಿಯು ಏನೇ ಆದರೂ ತನ್ನ ಅಭ್ಯಾಸ ಬಿಟ್ಟಿರಲಿಲ್ಲ. ಅದನ್ನು ಒಳ್ಳೇ[illegible]ಯಿಂದ ಮಾಡುತ್ತಿದ್ದಳು.

ಆ ಸಮಯದಲ್ಲಿ ಹಿಂದೀ ಭಾಷೆಯ ಪ್ರಚಾರವು ನಡೆದ[illegible]ರಿಂದ ಇಲ್ಲಿ ಧರ್ಮಾರ್ಥ ಕೆಲಸಮಾಡುತ್ತಿರುವ ಒಬ್ಬ ಮಾಸ್ತರ[illegible] ಇವಳಿಗೆ ಹಿಂದೀ ಕಲಿಸಲು ಬರುತ್ತಿದ್ದರು. ಅವಳು ಅವರ[illegible]

ನಾದರೂ ಸವಿ ಮಾತುಗಳನ್ನಾಡಿ ತನ್ನ ಕಡೆಗೆ ಒಲವಾಗುವಂತೆ ಮಾಡುತ್ತಿದ್ದಳು. ಇದೆಲ್ಲವರ ಸೂಕ್ಷ್ಮ ನಿರೀಕ್ಷಣೆ ಮಾಡಿದ ಮಾ. ಮಾ. ಇವರು ಅವಳಿಗೆ ಹೀಗೆ ಮಾಡಬೇಡೆಂದು ಸೂಚಿಸ ಹತ್ತಿದರೆ ಕೂಡಲೇ ಅವಳು ಅವರಿಗಿಂತ ಒಂದೆರಡು ಹೆಚ್ಚು ತಪ್ಪದ ಮಾತುಗಳನ್ನಾಡಿ ಬಿಡುತ್ತಿದ್ದಳು. ಮತ್ತು ತಾನು ಚಂಚಲಳಿರುವಳೆಂತಲೂ ತನ್ನನ್ನು ಆಗಿಂದಾಗ್ಯೆ ಕಿವಿಹಿಡಿಯಿರೆಂದೂ ಹೇಳುತ್ತಿದ್ದುದರಿಂದ ಮಾ. ಮಾ. ಇವರಿಗೆ ಗೂಢವೇ ಬಿದ್ದಿತು. ಮತ್ತು ಇವರಿಗೆ ಶ್ರೀ. ಕೃ. ಇವರ ಸ್ವಭಾವಕ್ಕಿಂತ ಆ ಹೆಣ್ಣು ಮಗಳ ಸ್ವಭಾವವೇ ಒಳ್ಳೆಯದಿರುವದೇನೊ ಎನ್ನಿಸುತ್ತಿತ್ತು. ಆ ಹುಡುಗಿಯು ತನ್ನ ಸವಿ ಮಾತುಗಳಿಂದ ಒಬ್ಬರ ಚಾಡಿ ಮತ್ತೊಬ್ಬರ ಮುಂದೆ ಆಡಿ ಪ್ರಸಂಗಬಿದ್ದರೆ ತನ್ನ ಮೇಲೆ ಯಾವ ದೋಷಾರೋಪಣೆ ಬಾರದಂತೆ ಎಚ್ಚರಿಕೆಯಿಂದ, ಯುಕ್ತಿಯಿಂದ, ನಿರ್ಲಜ್ಜತನದಿಂದ ವರ್ತಿಸುತ್ತಿದ್ದಳು. "ಲುಬ್ಧಮರ್ಥೇನ ಗೃಣ್ಹೀಯಾತ್ ಕೃದ್ಧಮಂಜಲಿ ಕರ್ಮಣಾ" ಎಂಬ ತತ್ವಗಳನ್ನು ಚೆನ್ನಾಗಿ ಅರಿತಿದ್ದಳು. ಪ್ರಸಂಗ ಬಿದ್ದರೆ ಕ್ಷಮೆಯನ್ನು ಬೇಡಲು, ಕೈಕಾಲು ಬೀಳಲು ಹಿಂಜರಿಯುತ್ತಿರಲಿಲ್ಲ. ಯಾಕೆಂದರೆ ಅಧಿಕಾರ ಮತ್ತು ಉಪಯುಕ್ತತೆ ಹೆಚ್ಚೆಂಬುದನ್ನು ಅರಿತು ಆದರಂತೆ ಪ್ರೇಮದಿಂದ, ಆದರದಿಂದ, ತಿರಸ್ಕಾರದಿಂದ, ತಾತ್ಸಾರದಿಂದ ಮತ್ತು ಮೋಸದಿಂದ ನಡೆಯುತ್ತಿದ್ದಳು, ಇದರಿಂದ ಅರಿಯದವರ ಮೇಲೆ ತನ್ನ ಮುಗಳು ನಗೆಯಿಂದ ತನ್ನ ವರ್ಚಸ್ಸು ಕೆಡವಿ, "ಇವಳು ಸಂಸ್ಥೆಯ ಕೆಲಸ ಒಳ್ಳೇ ಉತ್ತಮರೀತಿಯಿಂದ ಮಾಡುವಳೇನೋ" ಎಂದು ಅನಿಸುವಂತೆ ಮಾಡುತ್ತಿದ್ದಳು. ಇದರಿಂದ ಸ್ವಲ್ಪ ಕೀರ್ತಿವಂತಳಾಗಹತ್ತಿದಳು. ಉತ್ತಮ ಕಲೆ, ಅಭಿನಯ ಮುಂತಾದ ಸಾಮಾನ್ಯ ಜನರನ್ನು ಮೋಹಗೊಳಿಸುವಂಥ ಗುಣಗಳಿಂದಲೂ. ಉತ್ತಮ ರೂಪ ಬಣ್ಣ ಇವುಗಳಿಂದಲೂ ತರುಣರನ್ನಾಕರ್ಷಿಸ ಹತ್ತಿದಳು. ಇದರಿಂದ ಯಾವ ಪರಿಣಾಮವಾಯ್ತು ನೋಡುವಾ.

೨೬—೧—೪೪:— ಒಂದೇ ಮಾದರಿಯ ಘಟನೆಗಳಿಂದ ಈ ನಮ್ಮ ಕೃತ್ರಿಮ ಆಯುಷ್ಯದಲ್ಲಿ ಲಾಭ-ಹಾನಿಗಳೆರಡೂ ಆಗುತ್ತಿರುತ್ತವೆ. ವ್ಯವಹಾರ ಗೊತ್ತಿಲ್ಲದವರು ದುಃಖ-ಕಷ್ಟ ಸಹಿಸಬೇಕಾಗುತ್ತದೆ. ಗೊತ್ತಿದ್ದವರು ಈ ಕೃತ್ರಿಮ ಆಯುಷ್ಯದ ತೊಡಕಿನಿಂದ ಸಹಜವಾಗಿ ಪಾರಾಗಬಹು

ದು. ಕೆಲವು ವೇಳೆ ಅಜ್ಞಾನದಿಂದಲೇ ಸುಸೂತ್ರವಾಗಿ ಸಾಗಬಹುದು. ಯಾರೇ ಇಬ್ಬರು ವಿಚಾರಿಗಳಿದ್ದವರು ಏಕಾಂತದಲ್ಲಿ ಜಗಳಾಡಹತ್ತಿದರೆ, ಅಲ್ಲಿ ಅವರವರ ಜಗಳ ಅವರೇ ಬಗೆ ಹರಿಸಿಕೊಳ್ಳಬಹುದು. ಲೋಕಾಂತವಾಗಿ ಜಗಳವಾಡಿದಲ್ಲಿ ಬೇರೊಬ್ಬರು ಅವರ ಜಗಳದಿಂದ ಲಾಭತಕ್ಕೊಂಡು ಅವರವರಲ್ಲಿ ಹೆಚ್ಚಿಗೆ ಜಗಳ ಹಚ್ಚಲು ನೋಡುವರು. ವಿಚಾರಿಗಳಿದ್ದವರು ಸಹ ಸಿಟ್ಟಿನ ಸಮಯದಲ್ಲಿ ಮೂರ್ಖರಾಗುವ ಪ್ರಸಂಗವಿದೆ. ಆದರೂ ಅವರು, ತಲೆ ಸ್ವಲ್ಪ ಶಾಂತವಾದ ಮೇಲೆ ತಮ್ಮ ತಪ್ಪಿನ ವಿಚಾರ ಮಾಡುವರು. ಆದರೆ ಮೂರನೆಯವರ ಇಂತಹ ಮಧ್ಯಸ್ಥಿಕೆಯಿಂದ ಅಡ್ಡದಾರಿಗೆ ಬಿದ್ದವರಿಗೆ ಹೆಚ್ಚು ಜಗಳಾಡಲು ಆಸ್ಪದ ಸಿಗುವದು.

ಒಂದು ಸಂಗತಿಯ ಪರಿಣಾಮವು ಒಂದೇ ಕಾಲಕ್ಕೆ ಅಥವಾ ವಿವಿಧ ಕಾಲಕ್ಕೆ ಬೇರೆ ಬೇರೆಯಾಗುವದು. ನಮ್ಮ ಸಂಸ್ಥೆಗೆ ಬಾಂಡು ಬರೆದು ಕೊಟ್ಟವರ ಮೇಲೆ ಯಾವದೇ ಕಾರಣದಿಂದ ಹುಡುಗಿಯು ಸಂಸ್ಥೆ ಬಿಟ್ಟು ಹೋದಲ್ಲಿ, ಕೋರ್ಟಿಗೆ ಹೋದರೆ ಅವರ ಫಜೀತಿಯಾಗುವದೆಂದು ತಿಳಿದು ಅವರ ಅಕಲ್ಯಾಣ ಹೇಗೆ ಮಾಡಬೇಕೆಂದು ಸಂಸ್ಥೆಯವರು ಹಿಂದೆ ಮುಂದೆ ನೋಡಹತ್ತಿದರು. ಮುಂದೆ ಇದಕ್ಕೆ ಏನು ಮಾಡಬೇಕೆಂದು ಯೋಚಿಸುತ್ತಿರುವಾಗ ಒಮ್ಮೆ ಒಬ್ಬ ಶಾಲಾಖಾತೆಯ ಅಧಿಕಾರಿಯ ಎದುರಿಗೆ ತಮ್ಮ ತೊಡಕನ್ನು ಶ್ರೀ. ದಾ. ಇವರು ಹೇಳಲು ಆವರು ತಮಗೊಂದು ಅರ್ಜಿ ಹಾಕಿದರೆ ಕೆಲಸ ಸುಸೂತ್ರವಾಗುವದೆಂದು ಹೇಳಿದರು. ಮೊದಲು ಇದು ಗೊತ್ತಿಲ್ಲದ್ದರಿಂದ ಸಂಸ್ಥೆಗೆ ಎಷ್ಟೋ ಹಾನಿಯಾಗುತ್ತಿತ್ತು. ಆದರೆ ವಿದ್ಯಾರ್ಥಿನಿಯರಿಗೆ ಮುಂದೆ ಕೆಲವು ಪ್ರಸಂಗಗಳಲ್ಲಿ ಆ ಅಧಿಕಾರಿಗಳ ಹೇಳಿಕೆಯಂತೆ ಮಾಡಿದ್ದರಿಂದ ಫಾಯಿದೆಯಾಯಿತು. ಆದರೆ ಕೆಲವು ಜನರ ಸ್ವಾರ್ಥ ಬುದ್ಧಿಯ ನಿಮಿತ್ತ ಅಪಪ್ರಚಾರವೂ ಆಯಿತು. ಹೀಗೆ ಪ್ರತಿಯೊಂದು ಸಂಗತಿಗೆ ಕೆಟ್ಟದು, ಒಳ್ಳೆಯದು ಎಂದು ಎರಡೂ ಮಗ್ಗಲು ಉಂಟೇ ಉಂಟು. ಆದರೆ ಅದರ ಉಪಯುಕ್ತತೆಯ ಮೇಲೆ ಒಳ್ಳೆ ಹಾಗು ಕೆಟ್ಟದೆಂದು ತಿಳಿಯಬೇಕಾಗುವದು. ಈ ಕೃತ್ರಿಮ ಆಯುಷ್ಯದಲ್ಲಿ ಜ್ಞಾನಿಗಳ ಮೂಲಕ ಎಷ್ಟೋ ಸಂಗತಿಗಳು ಬುಡಮೇಲಾಗಿ ಲಾಭ–ಹಾನಿಗಳ ತಾಕಲಾಟಗಳು, ನಡೆದಿವೆ.

೨೭-೧-೪೮— ಈ ರೀತಿಯಾಗಿ ಹೆಣ್ಣು ಮಕ್ಕಳ ಹಣೆ ಬರಹವು ಗಿಡದ ಬುಡದಲ್ಲಿ ಹುಳಹತ್ತಿದಂತೆ ತೊಡಕಾಗಿದೆ. ಬೆನ್ನು, ಎದೆಯನ್ನು ಬೇರೆ ಮಾಡಬರುವದಿಲ್ಲ. ದೇಹಕ್ಕೆ ಎರಡೂ ಭಾಗಗಳು ಮಹತ್ವದವು, ಒಂದನ್ನು ಬಿಟ್ಟು ಇನ್ನೊಂದಕ್ಕೆ ಇರಲು ಬರುವದಿಲ್ಲ. ದೊಡ್ಡ ಮನೆತನಸ್ಥರೆಂದು ಹೇಳಿಕೊಳ್ಳುವ ಹೆಣ್ಣು ಮಕ್ಕಳು ಬಂದರೆಂದರೆ ಅವರಿಗೆ ಮನೆತದ ಗೌರವವನ್ನು ಬಿಟ್ಟು ತಲೆ ತೆಗೆದು ನಿಲ್ಲುವದು ಸಾಧ್ಯವಿಲ್ಲ. ಮನೆ ಬಿಟ್ಟಳೆಂದರೆ ನರವು ಸಿಗಲಾರದು. ಹೆಣ್ಣಿನ ಕಲ್ಯಾಣ ಮಾಡಬೇಕಾದರೆ ಅವರಲ್ಲಿ ಎಷ್ಟೇ ಕೆಟ್ಟಗುಣಗಳು, ವ್ಯಭಿಚಾರ ದೋಷಗಳಿದ್ದರೂ ಸಹ ಅವುಗಳನ್ನು ಮರೆತು ಅವರಿಗೆ ಸಹಾಯ ಮಾಡಿ ವಿದ್ಯಾ ಬುದ್ಧಿಗಳಿಗೆ ವ್ಯವಸ್ಥೆ ಮಾಡಿಕೊಟ್ಟಲ್ಲಿ ಯೋಗ್ಯವಾದೀತು. ಈಗ ಒಬ್ಬ ಗಂಡಸು ಎಷ್ಟೇ ವ್ಯಭಿಚಾರಿ ಇದ್ದರೂ ಸಹ ಇಡೀ ಜಗತ್ತಿನಲ್ಲಿ ನಡೆಯುವ ಎಲ್ಲ ಪವಿತ್ರ ಕೆಲಸಗಳಲ್ಲೂ ಭಾಗವಹಿಸಲು ಅವನಿಗೆ ಹಕ್ಕಿರುತ್ತದೆ. ಆದರೆ ಹೆಂಗಸಾದವಳಿಗೆ ಅದಿಲ್ಲ. ಅಣ್ಣ, ತಮ್ಮ, ಮಕ್ಕಳು, ಎಲ್ಲರೂ ಬೇಕಾದಷ್ಟು ವ್ಯಭಿಚಾರ ಮಾಡಿ ಅದೇ ಮನೆಯಲ್ಲಿ ಹಿರಿಯರೆನಿಸಿಕೊಂಡು ಮೆರೆಯುತ್ತಿರುತ್ತಾರೆ. ಆದರೆ ಹೆಣ್ಣು ಮಗಳು ಒಮ್ಮೆ ಕಾಲ್ಜಾರಿದಳೆಂದರೆ ನಿಷ್ಕರುಣೆಯಿಂದ ಅವಳನ್ನು ಮನೆಯಿಂದ ಹೊರಹಾಕುತ್ತಾರೆ. ಇಂಥ ಎಷ್ಟೋ ಉದಾಹರಣೆಗಳು ದಿನಾಲು ನಡೆಯುತ್ತಿರುತ್ತವೆ. ಇಡೀ ಕೆಲಸ ಸ್ತ್ರೀಸಮಾಜದ ವಿರುದ್ಧ ನಡೆದಾಗ್ಯೂ ಸಹ ಅದನ್ನು ಎದುರಿಸಬೇಕೆಂದು ಸಂಸ್ಥೆಯು ನೋಡಿದರೆ ಯಾರ ಸಲುವಾಗಿ ಹೋರಾಡಬೇಕೆಂದಿರುವವೋ ಅವರೇ ಸಂಸ್ಥೆಯಲ್ಲಿರಲು ಒಪ್ಪದಿದ್ದರೆ, ತಿರುಗಿ ಬಿದ್ದರೆ ಮಾಡುವದೇನು? ಸಂಸ್ಥೆ ತೆಗೆದ ಉದ್ದೇಶವೆಂದರೆ, ಕೆಟ್ಟು ಕಾಲು ಜಾರಿದ ಹೆಣ್ಣುಮಕ್ಕಳನ್ನು ಸುಧಾರಿಸ ಬೇಕೆಂದು ಆದರೆ ಕೆಟ್ಟದ್ದಕ್ಕೆಂದು ತೆಗೆದದ್ದು ಬಹಳ ದಿನ ಬದುಕಲಾರದೆಂದು ಜನರ ಅಪವಾದ. ಜಗತ್ತಿನಲ್ಲಿ ಯಾವುದಕ್ಕೆ ಕೆಟ್ಟದ್ದು, ಯಾವುದಕ್ಕೆ ಒಳ್ಳೆಯದು ಎನ್ನಬೇಕೆಂಬದನ್ನು ವಿಚಾರ ಮಾಡಿದರೆ ಅದರಲ್ಲಿ ತಾರತಮ್ಯಗಳೇ ಕಂಡುಬರುವದಿಲ್ಲ. ಇಡೀ ಜನಾಂಗವೇ, ಕೆಟ್ಟ ಕೆಲಸವೆಂದು ಹೆಂಗಸರ ಮೇಲೆ ದೋಷ ಕೊಡುವ ಕೆಲಸವನ್ನು ಮಾಡುತ್ತಾ ಮೇಲೆ ಪವಿತ್ರವೆಂದು ಹೇಳಿಕೊಂಡು ಮೆರೆಯುತ್ತದೆ. ಹೀಗೆ ಆ ಸು. ದಿಂದ ಬಂದ ಹುಡುಗಿಯು ಹಾದಿ ತಪ್ಪಿದ್ದರೂ ಸಹ ಇವರು ಜನರ ವಿರುದ್ಧ

ಹೋರಾಡಿ ಅವಳ ಕೆಟ್ಟ ಪರಿಸ್ಥಿತಿಯನ್ನು ಹೋಗಲಾಡಿಸಬೇಕೆಂದರೆ ಅದಕ್ಕೆ ಅವಳೇ ತಯಾರಿಲ್ಲದಿದ್ದರೆ ಮಾಡುವದೇನು? ಹೆಣ್ಣುಮಕ್ಕಳು ಈ ರೀತಿಯಾಗಲು ಕಾರಣವೇನೆಂದರೆ ಸ್ವಲ್ಪ ತಪ್ಪಿಗಾಗಿ ಅವಳಿಗೆ ಭಯಂಕರ ಶಿಕ್ಷೆಕೊಡುವದು. ಒಂದು ಮೆಟ್ಟಲು ಜಾರಿತೆಂದು ಅವಳನ್ನು ಹಿಡಿಯದಿದ್ದರೆ ಕಾಲು ಮತ್ತೊಮ್ಮೆ ಜಾರಿ, ಮುಂದೆ ಎರಡನೇ ಮೆಟ್ಟಲಿಗೂ ಬೀಳುವದು ಖಂಡಿತ. ಆದ್ದರಿಂದ ಮೊದಲನೇ ಮೆಟ್ಟಲು ಜಾರಿದಾಗಲೇ ಹಿಡಿದೆತ್ತಿದರೆ ಮುಂದೆ ಹಾಗೆ ಜಾರಿ ಬೀಳಬಾರದೆಂಬ ಕಲ್ಪನೆ ಬಂದು ಅಲ್ಲಿ ನಡೆಯುವಾಗ ಸಾವಕಾಶವಾಗಿ ನಡೆಯುವಳು. ಈ ವ್ಯಭಿಚಾರವೆಂಬ ದೋಷಾರೋಪಣೆಯು ಹೆಣ್ಣು ಮಕ್ಕಳ ಸರ್ವಸ್ವವನ್ನೂ ನಾಶಮಾಡುವದು. ಇದನ್ನು ಮುಚ್ಚಿಕೊಳ್ಳಲು ಬೇಕಾದಂಥ ಮಹಾಪರಾಧವನ್ನು ಮಾಡಲು ಗಂಡಸರೇ ಏಕೆ ಹೆಂಗಸರೂ ಸಹ ಹಿಂಜರಿಯುವದಿಲ್ಲ. ಇದರಿಂದ ಸಮಾಜದಲ್ಲಿ ಗಂಡು ಹೆಣ್ಣಿನ ಸಂಬಂಧವಾಗಿ ಡಾಂಭಿಕತನ ಮತ್ತು ಅವಾಸ್ತವ, ಸಂಶಯವೃತ್ತಿ ಹುಟ್ಟಿ ಸಮಾಜದ ಸುಖಕ್ಕೆ ಕಂಟಕವಾಗಿದೆ. ಕಥೆ ಕಾದಂಬರಿಗಳು ಈ ಸಂಶಯವೃತ್ತಿಯ ಪ್ರಚಾರ ಮಾಡುತ್ತವೆ. ಇಷ್ಟೆಲ್ಲವುಗಳ ಉತ್ಪತ್ತಿಯೇ ಈ ಸಂಶಯವೃತ್ತಿಯಲ್ಲಿದೆ.

೨೮-೧-೪೪:— ಪ್ರತಿಯೊಂದು ವ್ಯವಹಾರದಲ್ಲಿ ಹೆಣ್ಣುಮಕ್ಕಳ ಕಡೆಯಿಂದ ತಪ್ಪಾಗುತ್ತಿರುತ್ತದೆ. ಆದ್ದರಿಂದಲೇ ಅವರಿಗೆ ಶಿಕ್ಷೆಯಾಗುತ್ತದೆ. ಕೆಟ್ಟ ಕೆಲಸ ಮಾಡುವವರ ಕಡೆಗೇ ಆಗಲೀ, ಒಳ್ಳೆಯ ಕೆಲಸ ಮಾಡುವವರ ಕಡೆಗೇ ಆಗಲೀ ಎಲ್ಲರ ಲಕ್ಷವಿರುತ್ತದೆ. ಈಗ ನಮ್ಮಲ್ಲಿ ಯಾರಾದರೂ ಹೆಚ್ಚು ಹೆಚ್ಚು ಜಾಣತನವನ್ನಾಗಲೀ, ಕಾರ್ಯಮಾಡುವ ಹಂಬಲವನ್ನಾಗಲೀ ತೋರಿಸಹತ್ತಿದರೆ ಅವರ ಕಡೆಯಿಂದ ಸಮಾಜವಾದರೂ ಹೆಚ್ಚು ಲಾಭವನ್ನಪೇಕ್ಷಿಸುತ್ತದೆ, ಮತ್ತು ಹೆಚ್ಚಿಗೆ ಹಚ್ಚಿಕೊಳ್ಳುತ್ತದೆ ಇದರಂತೆ ಹೆಣ್ಣುಮಕ್ಕಳ ಸಲುವಾಗಿಯೂ ಎಲ್ಲರಿಗೂ ಅಂದರೆ ಗಂಡಸರು ಹೆಂಗಸರುಗಳೆಲ್ಲರಿಗೂ ಅವರ ಪಾವಿತ್ರ್ಯದ ಸಲುವಾಗಿ ಚಿಂತೆ ಹತ್ತಿರುತ್ತದೆ. ಯಾವದೇ ಒಬ್ಬ ಹೆಣ್ಣುಮಗಳು ಒಬ್ಬ ಗಂಡಸಿನೊಡನೆ ನಕ್ಕು ಕಲೆತು ಮಾತಾಡಹತ್ತಿದ್ದು ಕಂಡು ಬಂದರೆ ಎಲ್ಲರೂ ಅವರಿಗೆ ಕೆಟ್ಟಹೆಸರು ಇಡುವವರೇ.

ಒಂದು ಮನೆಯಲ್ಲಿನ ಜನರಲ್ಲಿ ಅದೂ ಗಂಡು-ಹೆಣ್ಣು ಇಬ್ಬರೂ ಕೂಡಿಯೇ ಇರುವ ಪ್ರಸಂಗದಲ್ಲಿಯೂ ಸಹ ಒಬ್ಬರಿಗೊಬ್ಬರು ಸಂತೋಷ ದಿಂದ ನಕ್ಕುನಲಿದು ಮಾತಾಡಲು ಆತಂಕವಾಗುವದು. ಅಲ್ಲಿ ಏನೇ ಕೆಟ್ಟ ಕೆಲಸ ವಾದಲ್ಲಿ ಅದರಲ್ಲಿ ಗಂಡಸಿನ ಭಾಗವೇ ಹೆಚ್ಚಿದ್ದರೂ ಸಹ ಹೆಂಗಸಿಗೇ ಶಿಕ್ಷೆ. ಗಂಡ ಸತ್ತ ಸೊಸೆಯು ಮನೆಯಲ್ಲಿದ್ದು ಮೈದುನ, ಭಾವಂದಿರುಗಳಪೈಕಿ ಯಾರೊಬ್ಬರಿಂದಲಾದರೂ ಆ ಸೊಸೆಯು ಕಾಲು ಜಾರಿದರೆ (ಅಸಹಾಯ ವಾದ್ದರಿಂದ ಯತ್ನವಿಲ್ಲದೆ ಜಾರುವದು ಸಹಜವೇ) ಅತ್ತೆ ಮಾವಂದಿರು ಇದರಲ್ಲಿ ಮಗನ ಅಂಗವೇ ಜಾಸ್ತಿ ಇದೆಯೆಂದು ತಿಳಿದರೂ ಸಹ ಸೊಸೆಯನ್ನು ಮನೆಯಿಂದ ಹೊರಹಾಕುತ್ತಾರೆ.

ಸ್ವಾಭಾವಿಕವಿದ್ದದ್ದನ್ನು ಬದಲು ಮಾಡುವದು ಕಠಿಣ; ಆದ್ದರಿಂದ ಈಗೀಗ ಅದಕ್ಕೆ ಬೇರೆ ಬೇರೆ ಉಪಾಯಗಳನ್ನು ತೆಗೆಯುತ್ತಿರುತ್ತಾರೆ. ಹೆಂಗಸರಿಗಾದರೂ ಗಂಡಸರಂತೆ ಸ್ವಾತಂತ್ರ್ಯ ದೊರೆಯಬೇಕಾದರೆ ಸಂತತಿ ಸಂಯಮನವನ್ನು ಪಾಲಿಸಬೇಕೆಂದು ಶ್ರೀ ಕರ್ವೆಯವರು ಎದುರಾ ಎದುರು ಹೇಳಿದ್ದಾರೆ. ಕೃತ್ರಿಮವಿದ್ದದ್ದನ್ನು ಬದಲು ಮಾಡಲು ಪ್ರಯತ್ನಿಸಿ ದರೆ ಒಂದು ವೇಳೆ ಬದಲಾಗಬಹುದು. ಆದರೆ ಗಂಡು-ಹೆಣ್ಣಿನ ಆಕರ್ಷಣೆ, ಮತ್ತು ದೇಹರಚನೆ ಇವು ಯಾವ ಕೃತ್ರಿಮತೆಯ ಮೇಲೂ ಅವಲಂಬಿಸಿರುವ ದಿಲ್ಲ. ಈ ಕೃತ್ರಿಮತೆಯು ಸಂತತಿ ಸಂಯಮನದಲ್ಲಿ ಕೆಲವು ಉಪಾಯದಿಂದ ಸ್ವಲ್ಪ ದಿನಗಳವರೆಗೆ ಸ್ವಾತಂತ್ರ್ಯದ ಉಪಭೋಗ ಲಾಭ ಸಿಕ್ಕಿದರೂ ಕ್ರಮೇಣ ಸುಖದ ಲಾಲಸೆ ಮತ್ತು ನಿರ್ಭಯ, ಸ್ವೈರಾಚಾರ ಇವುಗಳ ಪರಿಣಾಮ ವಾಗಿ ಪ್ರಕೃತಿ ಶರೀರ ಕೆಟ್ಟು ಜನನೇಂದ್ರಿಯಗಳಿಗೆ ಧಕ್ಕೆ ತಗಲುವದು. ಆದ್ದರಿಂದ ಈ ಉಪಾಯವು ಹಿತಕರವಲ್ಲ. ಅದರಂತೆ ಬಂಧನದ ಉಪಾ ಯವನ್ನು ಜಗತ್ತಿನ ಪ್ರಾರಂಭದಿಂದ ಮಠಗಳಲ್ಲಿ, ಮನೆಗಳಲ್ಲಿ ಮಾಡಿದರೂ ಅದರಿಂದ ಪ್ರಯೋಜನವಾಗಿಲ್ಲ. ಬಸ್ತಿಗಳಲ್ಲಿ, ಚರ್ಚಗಳಲ್ಲಿ, ಮಠಗಳಲ್ಲಿ ಅನಾಹುತಗಳು ಕಂಡುಬರುತ್ತವೆ. ಇದಕ್ಕೆ ನಿಜವಾದ ಮಾರ್ಗವೆಂದರೆ ಸೃಷ್ಟಿಧರ್ಮಕ್ಕನುಗುಣವಾಗಿ ಜರುಗಿದ ಸಂಗತಿಗಳಲ್ಲಿ ಯಾವ ದೋಷ

ವಿಲ್ಲೆಂಬುದೇ ಸತ್ಯ ಹಾಗೂ ಹಿತಕರ ಸಂಗತಿ; ಅದಕ್ಕನುಗುಣವಾಗಿ ಎಲ್ಲ ಸಮಾಜರಚನೆ ಏರ್ಪಡಿಸಲು ಯತ್ನಿಸಬೇಕು.

೨೯-೧-೪೮:— "A stitch in time saves nine" ಎಂದು ಇಂಗ್ಲೀಷಿನಲ್ಲಿ ಒಂದು ಗಾದೆ ಮಾತುಂಟು. ಯಾವ ಕೆಲಸ ಮಾಡಬೇಕಾದರೂ ವೇಳೆಗೆ ಸರಿಯಾಗಿ ಮಾಡಬೇಕು. ಆದರೆ ಮಾಡುವ ಕೆಲಸ ಗಡಿಬಿಡಿ ಯಿಂದ ಮಾಡಿದರೆ ಅದು ಕೆಟ್ಟುಹೋಗುವದು. ಉದಾ:— ತೀ. ದಾ. ಅವರು ನಿನ್ನೆ ಪ್ರಾರ್ಥನೆಗೆ ಬಂದಾಗ ಖುರ್ಚಿಯ ಪಟ್ಟಿ ಉಬ್ಬಿರುವದೆಂದು ತಿಳಿದು ಅದನ್ನು ಯಾರಾದರೂ ನೋಡುವರೋ ಇಲ್ಲವೊ ಎಂದು ನೋಡುವ ಕುತೂಹಲದಿಂದ ಆ ಕಡೆಗೆ ಲಕ್ಷಕೊಡದೆ ಹೋದರು. ಆದರೆ ಚಿ. ಇವನು ಅದರ ಮೇಲೆ ಚೇಷ್ಟೆಮಾಡುತ್ತ ಕುಳಿತಾಗ ಆ ಪಟ್ಟಿಯಿಂದ ಹೊರಬಿದ್ದ ಮೊಳೆಯಿಂದ ತನ್ನ ಅಂಗಿಯು ಹರಿಯಿತೆಂದು ಆ ಪಟ್ಟಿಯನ್ನು ಕಿತ್ತಿದನು. ಇದರಿಂದ ಖುರ್ಚಿಯೇ ಹಾಳಾಗುವ ಪ್ರಸಂಗ ಬಂದಿತು. ಆದರೆ ಆ ಪಟ್ಟಿ ಎದ್ದಕೂಡಲೇ ಒಂದು ಮೊಳೆಯನ್ನು ಕೂಡಿಸಿದ್ದರೆ ಈ ಪ್ರಸಂಗವು ಬರು ತ್ತಿರಲಿಲ್ಲ. ಅದರಂತೆ ಪ್ರಾರ್ಥನೆಯು ಕಾಲಪಲ್ಲಿ ಮಹತ್ವದ, ವಿಶೇಷವಾಗಿ ಹೆಣ್ಣುಮಕ್ಕಳ ಹಿತದ ದೃಷ್ಟಿಯಿಂದ ಭಾಷಣ ನಡೆದಾಗ ಏನಾದರೊಂದು ಕೆಲಸದ ನಿಮಿತ್ತ ಪ್ರಾರ್ಥನೆಯನ್ನು ತಪ್ಪಿಸಿದರೆ ಲಾಭವಾಗಬಹುದೋ? ಹೇಳುವವರಿಗೆ ಬೇಜಾರುಂಟಾಗುವದು. ಅವರ ಮನಸನೊಂದು ನಿಮ್ಮ ಬಗ್ಗೆ ಅನಾದರ ಹುಟ್ಟಬಹುದು. ತಮ್ಮ ಹಾನಿಯಂತೂ ಆಯುಷ್ಯದ ದೃಷ್ಟಿಯಿಂದ ಆಗೇ ತೀರುವದು. ಮೇಲಾಗಿ ಇಲ್ಲಿ ನಡೆದ ಸಂಗತಿಗಳೇ ಪರೀಕ್ಷೆಗೆ ಉಪಯೋಗ ಬೀಳುವದು. ಆಯುಷ್ಯಕ್ಕಂತೂ ಸರಿಯೇ ಸರಿ. ಇದು ತಿಳಿಯಬೇಕಾದರೆ ಸವ್ಕಲ್ಲಿ ತಾರತಮ್ಯ ಜ್ಞಾನ ಬೇಕು. ಯಾವಾಗ ಯಾವದು ಮಾಡಬೇಕೆಂಬ ತಿಳುವಳಿಕೆ ಬೇಕು. ಈ ಗುಣವು ಆ ಸು. ಹುಡುಗಿಯಲ್ಲಿತ್ತು. ವಿಶ್ವಾಸ ತೋರಿಸಿದರೆ ಕೆಲಸವಾಗುತ್ತದೆಂದು ಕಂಡರೆ ಅದರಂತೆಯೂ, ವಿಶ್ವಾಸಘಾತದಿಂದ ಆಗುವದೆಂದು ಕಂಡರೆ ಅದರಂತೆಯೂ ಮಾಡಲು ಎಷ್ಟೋ ಸ್ವಾರ್ಥೀ ಜನರಾಗಲೀ, ಅಜ್ಞಾನಿಗಳಾಗಲೀ ಬಯ ಸುತ್ತಾರೆ.

ಹಿಂದೆ ಯಾವದೇ ಗುರುಗಳು ತಮ್ಮ ಶಿಷ್ಯರಿಗೆ ಉಪದೇಶ ಮಾಡ ಬೇಕಾದರೆ ಅವರ ಗುಣಗಳನ್ನು ಪರೀಕ್ಷೆ ಮಾಡುತ್ತಿದ್ದರು. ಅವರು ಮಾಡಿದ ಉಪದೇಶದಂತೆ ನಡೆಯುವದರಿಂದ ಸ್ವಾರ್ಥ ಇಲ್ಲವೆ ಪರಮಾರ್ಥ ಆಗಿಯೇ ತೀರುವದು. ವಿಚಾರ ಮಾಡಿ ನೋಡಿದರೆ, ವಿಶ್ವಾಸವೆಂದರೆ ಯಾವದಕ್ಕನ್ನ ಬೇಕೋ ಅದೇ ತೊಡಕಿನದಾಗಿದೆ. ಎಷ್ಟೋ ವಿಶ್ವಾಸಿಕರೆಂದು ನಂಬಿ ಎಷ್ಟೋ ವರ್ಷಗಳ ವರೆಗೆ ಒಬ್ಬರ ಬಳಿಯಲ್ಲೊಬ್ಬರು ಇದ್ದು ಒಬ್ಬರಿಗೊಬ್ಬರ ಗುಣಗಳನ್ನು ಚೆನ್ನಾಗಿ ಅರಿತಾಗ್ಯೂ ಸಹ ಅವರವರ ನಡುವೆ ಸ್ವಾರ್ಥದ ಪ್ರಶ್ನೆಯು ಬಂದೊಡನೆ ಆ ವಿಶ್ವಾಸವು ಶಿಥಿಲವಾಗುವ ಸಂಭವ ವಿರುತ್ತದೆ. ಮುಂದೆ ಒಬ್ಬರೊಡನೊಬ್ಬರು ವಿಶ್ವಾಸದಿಂದ ಹೇಳಿದ ಗುಟ್ಟು ಮಾತುಗಳೆಲ್ಲವೂ ರಟ್ಟಾಗುತ್ತವೆ. ಇದರಿಂದ ಬಹಳ ಹಾನಿಯಾಗಿ ಸಮಾ ಜದ ರಚನೆಯೇ ಕೆಟ್ಟುಹೋಗುವದು. ವಿಶ್ವಾಸಘಾತದಿಂದ ಸ್ವಾರ್ಥಕ್ಕೆ ಅಥವಾ ಪರಮಾರ್ಥಕ್ಕೆ ಅನುಕೂಲವಾಗುವಂತೆ ಭಾಸವಾದರೂ ಸಹ ಮಾನವೀಸಮಾಜದ ತಳಹದಿಯೇ ಬುಡಮೇಲಾಗುವದು. ಇದರಲ್ಲಿ ಕಾರಣವಿಲ್ಲದೆ ಗುರುಹಿರಿಯರು, ಗೆಳತಿಗೆಳೆಯರು ವಚನ ಅಥವಾ ಆಶೆ ಮಾಡಲು ಹೆಚ್ಚುವರು. ಇದು ತಪ್ಪು. ಉದಾ:- ವೋಟ ಬೇಡಲು ಬಂದಾಗ ಉಮೇದವಾರರ ಕರ್ತವ್ಯವು ವೋಟರರಿಗೆ ತಾವು ನಿಂತಿದ್ದು ತಿಳಿಸುವದಿಷ್ಟೇ ಇರುತ್ತದೆ. "ನೀವು ನನಗೆ ಹಾಕಿರಿ, ಮಿಕ್ಕವರಿಗೆ ಹಾಕಬೇಡಿರೆ"ಂದು ವಚನ ತೆಗೆದುಕೊಂಡರೆ ಅದನ್ನು ಪಾಲಿಸುವದು ತಪ್ಪು. ಯಾಕೆಂದರೆ ಉಮೇದು ವಾರನು ತನ್ನ ಹಕ್ಕಿನ ಅತಿಕ್ರಮಣ ಮಾಡಿರುತ್ತಾನೆ.

೩೦-೧-೪೮:— ಇಡೀ ಜಗತ್ತಿನ ವ್ಯಾಪಾರವು ವಿಶ್ವಾಸದಿಂದ ನಡೆ ದಿರುತ್ತದೆ. ಅದರಲ್ಲಿ ಲಾಭ-ಹಾನಿಗಳು ಗೊತ್ತಿಲ್ಲದೆಯೇ ಆಗುತ್ತಿರುತ್ತವೆ. ಅಧಿಕಾರಿಗಳಾಗಲೀ, ಗುರುಗಳಾಗಲೀ ಮೊದಮೊದಲು ಹೇಳುತ್ತಿರುವ ಮಾತುಗಳು ಅಧಿಕಾರ ರೂಪದಲ್ಲಿರುತ್ತವೆ. ಆವರೆ ಕೈಕೆಳಗಿನವರು, ಶಿಷ್ಯರು ತಮ್ಮ ವಿಶ್ವಾಸಕ್ಕೆ ಹೆಚ್ಚುಹೆಚ್ಚು ಪಾತ್ರರಾದಂತೆ ಕಂಡರೆ ತಮಗೆ ಗೊತ್ತಿದ್ದ ಬೇರೆಬೇರೆ ಗುಟ್ಟನ್ನು ಶಿಷ್ಯರಿಗೆ ಹೇಳುವದೇ ಗುರುಮಂತ್ರವು. ಗುರು

ಹಿರಿಯರಲ್ಲಾದರೂ ಸ್ವಾರ್ಥ ಹುಟ್ಟುವದು ಸೃಷ್ಟಿನಿಯಮವಲ್ಲಿ ಸ್ವಾಭಾವಿಕವೇ ಸರಿ. ಅದರಂತೆ ಶಿಷ್ಯರಲ್ಲಿ ಸಹ ಸ್ವಾರ್ಥವು ಇದ್ದೇ ಇರುವದು. ಗುರೂಪದೇಶ ಹೊಂದಿದವರಿಗೆ ಸ್ವಾರ್ಥವು ದೂರಾಗುವದೆಂದು ಹೇಳಲಾಗುವದಿಲ್ಲ. ಮನುಷ್ಯ ಸ್ವಭಾವಕ್ಕನುಸರಿಸಿ ಅವರವರಲ್ಲಿ ಈ ಸ್ವಾರ್ಥವು ಹೆಚ್ಚು ಕಡಿಮೆಯಾಗಿರುವದು. ಗುರುಗಳು ಸ್ವಾರ್ಥಬುದ್ಧಿಯಿಂದ ಯಾವದೇ ಒಂದು ಗುಟ್ಟನ್ನು ಶಿಷ್ಯರಿಗೆ ಹೇಳಿಕೊಟ್ಟಾಗ ಸ್ವಾರ್ಥಿ ಶಿಷ್ಯನೊಬ್ಬನಿಗೆ ಗುರುಗಳ ಸ್ವಾರ್ಥವನ್ನು ಹೊರಗೆಡವಬೇಕೆಂಬ ಬುದ್ಧಿ ಹುಟ್ಟಿದಲ್ಲಿ ಕೆಲಸವು ಕೆಡುತ್ತದೆ. ಅದ್ದರಿಂದ ಈ ಪ್ರಸಂಗದಲ್ಲಿ ಯಾವುದನ್ನು ಗುಟ್ಟೆಂದು ಮುಚ್ಚಿಡಬೇಕು? ಯಾವುದನ್ನು ಯಾರಿಗೆ ಹೇಳಬೇಕು? ಯಾವ ವೇಳೆಯಲ್ಲಿ ಹೇಳಬೇಕು? ಈ ಗುಟ್ಟನ್ನು ಪಾಲಿಸುವದು ಎಷ್ಟು ಕಠಿಣವಿದೆ ಎನ್ನುವದನ್ನು ತಿಳಿಯುವದು ಬಹಳ ಕಠಿಣವಿದೆ. ಸ್ವಾರ್ಥಕ್ಕೆ ಬಲಿಬಿದ್ದ ಗುರುಗಳು ವ್ಯವಹಾರ ಚಾತುರ್ಯಕ್ಕೆಂದು ಹೇಳಿಕೊಟ್ಟ (ಅದಕ್ಕೆ ಸ್ವಾರ್ಥವೆನ್ನಿರಿ, ಪರಮಾರ್ಥವೆನ್ನಿರಿ) ಗುಟ್ಟನ್ನು ಶಿಷ್ಯರು ಹೊರಗೆಡವಿ ಗುರುಗಳ ಫಜೀತಿ ಮಾಡಹತ್ತಿದರೆ ಯಾವ ಕಾರ್ಯಗಳೂ ಸುಸೂತ್ರವಾಗುವದಿಲ್ಲ. ಇಂಥ ಪ್ರಸಂಗದಲ್ಲಿ ಗುರುಗಳು ಯಾರನ್ನು ಶಿಷ್ಯರನ್ನಾಗಿ ಆರಿಸಿಕೊಳ್ಳಬೇಕು ಎನ್ನುವದು ಸಹ ಒಂದು ಪ್ರಶ್ನೆಯೇ ಆಗಿದೆ. ಈ ಮನುಷ್ಯನ ವ್ಯವಹಾರದಲ್ಲಿ ಜ್ಞಾನ ಅಜ್ಞಾನಗಳೆರಡರಿಂದಲೂ ಲಾಭ-ಹಾನಿಗಳು ನಡೆದಿರುತ್ತವೆ. ಉದಾ:- ಪೋಸ್ಟಿನಲ್ಲಾಗಲೀ, ಬ್ಯಾಂಕಿನಲ್ಲಾಗಲಿ ಚೆಕ್ಕು ಮುರಿಸಲು ಹೋದರೆ ನಮ್ಮಲ್ಲಿಯ ಅಜ್ಞಾನದ ಮೂಲಕ ಅಲ್ಲಿಯ ಅಧಿಕಾರಿಗಳು ನಮ್ಮ ಕಡೆಯಿಂದ ತಾವು ತೆಗೆದುಕೊಳ್ಳತಕ್ಕ ಹಣಕ್ಕಿಂತ ಹೆಚ್ಚಿಗೆ ತೆಗೆದುಕೊಳ್ಳುತ್ತಿದ್ದರು ಆದರೆ ನಾವು ಸ್ವಲ್ಪ ವ್ಯವಹಾರ ಜ್ಞಾನಿಗಳಾಗಿ ಇದರ ಒಳಮರ್ಮವನ್ನು ಕಂಡುಹಿಡಿದುದರಿಂದ ಮತ್ತು ಬ್ಯಾಂಕಿನಲ್ಲಿ ನಮ್ಮದೊಂದು ಖಾತೆ ಇಡುವದರಿಂದ ರೊಕ್ಕ ಕೊಡದೆ ಚಕ್ಕು ಮುರಿಸಿ, ನಮ್ಮ ಕೆಲಸವನ್ನು ಮಾಡಿಕೊಳ್ಳುತ್ತಿದ್ದೇವೆ.

ಈ ತೆರನಾಗಿ ನಮ್ಮ ಈ ಕೃತ್ರಿಮ ನಿಯಮಗಳ ಅಜ್ಞಾನದಿಂದ ನಮಗೆ ನಷ್ಟ, ಆ ನಿಯಮಗಳು ಗೊತ್ತಿದ್ದವರಿಗೆ ಲಾಭ. ನಾಡಿ ಪರೀಕ್ಷೆಯಿಂದ

ವೈದ್ಯರಿಗೆ ಏನು ತಿಳಿಯುತ್ತದೆಯೋ ದೇವರೇ ಬಲ್ಲ. ಆದರೆ ರೋಗಿಯ ಅಜ್ಞಾನದ ಲಾಭ ಮಾತ್ರ ಆ ವೈದ್ಯರಿಗೆ ಸಿಗುತ್ತದೆ. ಈ ದೃಷ್ಟಿಯಿಂದ ಈ ಪ್ರಾಪಂಚಿಕ ವ್ಯವಹಾರವೆಲ್ಲ ಮೋಸದಿಂದ ನಡೆದಿರುತ್ತದೆ. ದೇವರೇನೂ ಇತ್ತ ಕಡೆಗೆ ಲಕ್ಷಕೊಡುವದಿಲ್ಲ. ಮನುಷ್ಯನು ತನ್ನ ಕೃತಿಯಿಂದ ತಾನೇ ದುಃಖಿಯಾಗಿ ತನ್ನ ಅಣ್ಣತಮ್ಮಂದಿರನ್ನು ದುಃಖಿಯಾಗಿ ಮಾಡಿರುವನು.

೩೧-೧-೪೮:— ಮನುಷ್ಯನ ಕಡೆಯಿಂದ ಸ್ವಾಭಾವಿಕವಾಗಿ ಆಯುಷ್ಯದಲ್ಲಿ ಎಷ್ಟೋ ತಪ್ಪುಗಳು ಆಗುತ್ತಿರುತ್ತವೆ. ವಿದ್ಯಾ, ಶಾಲೆ ಇವುಗಳ ಮೂಲಕ ಕೆಲವೊಂದು ಭಾವನೆಗಳು ಕುಗ್ಗುತ್ತವೆ. ಕೆಲವೊಂದು ಉದ್ರೇಕಗೊಳ್ಳುತ್ತವೆ. ಮ. ಗಾಂಧಿಯವರು ಸಾರಾ ಸಾರ ವಿಚಾರ ಮಾಡುತ್ತಿದ್ದುದರಿಂದ ಅವರ ಭಾವನೆಯು ಉತ್ಕಟವಾಗಿತ್ತು. ಆದರೆ ಅವರ ಕೊಲೆಗಡಕನಿಗಾದರೂ ತನ್ನ ಆ ವೇಗವನ್ನು ತಡೆಯುವದು ತನ್ನಿಂದಾಗದೆ ಆ ಕೆಲಸಕ್ಕೆ ಉದ್ಯುಕ್ತನಾಗಿರಬಹುದು. ತಮ್ಮ ಸ್ವಾರ್ಥವಿಲ್ಲದಿದ್ದರೂ ಸಹ ಕೆಲವು ವೇಳೆ ಮನುಷ್ಯನು ತತ್ವನಿಷ್ಠೆಯಿಂದ ಸಿಟ್ಟಿಗೇಳುತ್ತಾನೆ. ಯಾವ ನಿಯಮಗಳು ಇಷ್ಟು ದಿನ ಸಮಾಜದ ಉತ್ಕರ್ಷಕ್ಕೆ ಅವಶ್ಯಕವಿದೆಯೆಂದು ತಿಳಿದು ಮಾಡಿರುವವೋ, ಅಂಥವುಗಳಿಗೂ ಸಹ ಕಾಲಾಂತರದಿಂದ ಅಳಿಗಾಲ ಬರುತ್ತಿದೆ. ಅವುಗಳನ್ನು ಬಿಡುವದೆಂದರೆ ನಮ್ಮ ನೈತಿಕ ಭಾವನೆಗೆ ವಿರುದ್ಧವಾಗುತ್ತದೆ. ಹೀಗಿರುವಾಗ ಪೂಜ್ಯರಾದ, ಸತ್ವಗುಣಿಗಳಾದ ಮ. ಗಾಂಧಿಯವರ ಕೊಲೆಗಡಕನ ಮೇಲೆ ಸಾಮಾನ್ಯ ಜನರಿಗೆ ದ್ವೇಷ ಬರುವದು ಸ್ವಾಭಾವಿಕ; ಏಕೆಂದರೆ ನಾವು ಸಣ್ಣ-ಪುಟ್ಟ ಮಾತುಗಳಿಗೂ ಸಹ ಉದ್ರೇಕಗೊಳ್ಳುತ್ತೇವೆ. ಎಷ್ಟೋ ಕಡೆಯಲ್ಲಿ ಈಗ ಹಿಂದೂ ಮುಸಲೀಮರ ಜಗಳದಲ್ಲಿ ಪ್ರತ್ಯಕ್ಷ ಹೆಂಡಿರು-ಮಕ್ಕಳನ್ನು ಕೊಲ್ಲುತ್ತಿರುವಾಗ ಆ ದುಃಖವನ್ನು ತಡೆದುಕೊಂಡು ವೈರಿಗಳಿಗೆ ಕೇಡುಕಣಿಸದೆ ಸುಮ್ಮನಿರಬೇಕೆಂದು ಮ. ಗಾಂಧಿಯವರು ಸಂತರಿಗೊಪ್ಪುವಂಥ ಉಪದೇಶ ಮಾಡುತ್ತಿರುವಾಗ ತರುಣರು ಎಷ್ಟು ಸೈರಣೆ ಮಾಡಬೇಕು!. ದುಃಖಕಷ್ಟಗಳನ್ನು ಹೇಗೆ ಕಣ್ಣುಗಳಿಂದ ನೋಡಿಯೂ ಸುಮ್ಮನಿರಬೇಕೆನ್ನುವದನ್ನು ನೆನಸಿಕೊಂಡರೆ ನಮಗೆ ಕೊಲೆಗಡುಕನ

ಮೇಲೆ ದ್ವೇಷ ಹುಟ್ಟುವದಕ್ಕಿಂತ ಮ. ಗಾಂಧಿಯವರು ಹೇಳಿದಂತೆ ವಿಚಾರ ಮಾಡಿದರೆ ಅವನ ಮೇಲೆ ಕನಿಕರ ಹುಟ್ಟುತ್ತದೆ. ಅಯ್ಯೋಪಾಪ, ಎಷ್ಟು ಮೂಢನಿರುವನು? ಇಂಥವನ ಕೊಲೆ ಮಾಡಬೇಕೇ? ಯಾವ ಭಾವನೆಗಳಾದರೂ ಕೆರಳಿದರೆ ಅವು ಉತ್ತೇಜಿತವಾಗುವವು. ಅದರಲ್ಲಿ ಅನುಭವವಿಲ್ಲದ ತರುಣರ ಭಾವನೆಗಳನ್ನು ಕೆರಳಿ, ಪ್ರಚಾರಕರು ತಮ್ಮ ಪ್ರಚಾರ ಕಾರ್ಯವನ್ನು ಸಾಧಿಸುವರು. ಧ್ಯೇಯುಕ್ಕನುಗುಣವಾಗಿ ಅದರ ಪರಿಣಾಮ ಒಳ್ಳೇದಾಗಲೀ ಕೆಟ್ಟದ್ದಾಗಲೀ ಆಗುವದು. ಆದ್ದರಿಂದ ಅಜ್ಞಾನದಲ್ಲಿ ಒಂದು ಅಂಗವನ್ನು ಬಚ್ಚಿಟ್ಟು ಯಾವದೇ ಪ್ರಚಾರ ಕಾರ್ಯಮಾಡುವದು ಇಷ್ಟು ಜಾತಿಜಾತಿಗಳಲ್ಲಿ ಭೇಧ ಮತ್ತು ಅಶಾಂತತೆ ಹುಟ್ಟಿಸಲು ಕಾರಣವಾಗಿವೆ ಇದರಿಂದ ತರುಣರ ಭಾವನೆಗಳು ಉತ್ಕಟವಾಗಿವೆ.

೧-೨-೪೮:— ಲೋಕವ್ಯವಹಾರ ದೃಷ್ಟಿಯಿಂದ ಯಾವ ಯಾವ ರೀತಿ ತೊಡಕು ಬರುತ್ತದೆ, ಅದನ್ನು ಕಾಯ್ದುಕೊಳ್ಳಲು ಯಾವ ಯಾವ ಗೊಂದಲವಾಗುತ್ತದೆ, ಇದು ಈ ಮ. ಗಾಂಧಿಯವರ ಕೊಲೆಯ ಗೊಂದಲದಿಂದ ಗೊತಾಗುತ್ತದೆ. ಹಿಂದು ಸರಕಾರವು ಕೊಲೆಗಡಕನ ಹೆಸರು ಪ್ರಕಟಿಸಬಾರದೆಂದಿದ್ದಿತ್ತು, ಆದರೆ ಈಗ ಸಧ್ಯದಲ್ಲಿ ಹಿಂದುಗಳಿಗೆ ಮುಸ್ಲೀಮರ ಮೇಲೆ ಹಗೆತನವಿರುವದರಿಂದ ಅವರೇ ಕೊಲೆ ಮಾಡಿರುವರೆಂದು ಹಿಂದುಗಳು ಅವರ ಮೇಲೆ ಸಿಟ್ಟಿಗೇಳಬಹುದೆಂದೂ, ಇದರಿಂದ ಅನಾಹುತವಾಗಬಹುದೆಂದೂ ತಿಳಿದು ಸರ್ಕಾರದವರು ಇದನ್ನು ಪ್ರಕಟಿಸಿದರು. ಬೆಂಗಳೂರಲ್ಲಿ ದಂಗೆಯನ್ನು ಹಿಂದುಗಳೇಮಾಡಿ ಮುಸಲ್ಮಾನರ ಹೆಸರು ಹೇಳಹತ್ತಿದರು. ಇಂಗ್ಲೀಷರಿಗೆ ಮ. ಗಾಂಧಿಯವರ ತತ್ವದಿಂದ ಎಷ್ಟೋ ಲುಕ್ಸಾನವಾಗುತ್ತಿತ್ತು. ಆದರೆ ಇವರು ವಿಚಾರಮಾಡಿ ಯುಕ್ತಿ ವ್ಯವಹಾರ ಚಾತುರ್ಯದಿಂದ ನಡೆಯುತ್ತಿರುವದರಿಂದ ಅವರು ಇವರ ಮೇಲೆ ಸಿಟ್ಟಿಗೇಳಲು ಅಸ್ಪದ ದೊರೆಯಲಿಲ್ಲ. ಹೀಗೆ ವಿಚಾರಮಾಡಿ ಕೆಲಸ ಮಾಡುವವರ ಮೇಲೆ ಯಾರೂ ಸಿಟ್ಟಿಗೇಳಲಾರರು. ಈಗಾದರೂ ಆ ಕೊಲೆಗಡಕನು ಹಿಂದೂಮಹಾಸಭೆಯ ತತ್ವದವನಿದ್ದು ಮುಸಲ್ಮಾನರಿಂದ

ಹಿಂದುಗಳಿಗೆ ಅಪಾರ ಅಸಹ್ಯವಾದ ಹಾನಿಯಾಗುವದೆಂಬ ಒಂದೇ ಒಂದು ವಿಷಯವಾಗಿ ವಿಚಾರ ಮಾಡುತ್ತಿದ್ದುದರಿಂದ ಅವನಿಗೆ ಯಾವಾಗಲೂ ಅದರದೇ ಚಿಂತೆ ಹಿಡಿದು ಮ. ಗಾಧಿಯವರು, ಮುಸ್ಲಿಮರನ್ನು ಅಣ್ಣ ತಮ್ಮಂದಿರಂತೆ ತಿಳಿಯಿರೆಂದೂ ಅವರು ಅನ್ಯಾಯ ಮಾಡಿದರೆ ನೀವು ಪ್ರತಿಕಾರ ಮಾಡಬೇಡಿರೆಂದೂ ಹೇಳಲು ಕೊಲೆಗಡುಕನಿಗೆ ಅವರ ಮೇಲೆ ಸಿಟ್ಟಗೇಳುವ ಪ್ರಸಂಗ ಬಂದಿತು, ಮತ್ತು ಮ. ಗಾಂಧಿಯವರೇ ಒಬ್ಬ ರಾಕ್ಷಸ, ಅವರಿಂದಲೇ ನಮಗೆ ಲುಕ್ಸಾನವಾಗುತ್ತದೆಂದು ಸ್ಫೂರ್ತಿದಾಯಕವಾಗಿ ಹೇಳುವ ಕೆಲವರ ಮಾತಿಗೆ ಎಷ್ಟೋ ಜನರು ಮರುಳಾಗಿ ತಾವು ತತ್ವಶಃ ವಿಚಾರ ಮಾಡದೆ ಯಾವನು ಹೇಳಿದನೋ ಅವನ ಮಾತನ್ನು ನಂಬಿ ಅವರೊಬ್ಬರೇ (ಮ. ಗಾಂಧಿ) ತಮ್ಮ ತತ್ವದ ವಿರುದ್ಧವಿದ್ದುದರಿಂದ ಅವರು ಸತ್ತರೆ ತಮ್ಮ ಕಾರ್ಯ ಕೈಗೂಡುವದೆಂದು ಇಂಥ ಕೊಲೆಗಡಕತನದ ಹೇಯ ಕಾರ್ಯ ಮಾಡಲು ಹಿಂಜರಿಯಲಿಲ್ಲ. ಯಾರು ಪಂಚಾಯಿತಿ ಕೆಲಸ ಮಾಡುತ್ತಿದ್ದರು ಅಂಥವರ ಕೊಲೆ ಮಾಡಬೇಕಾದರೆ ಪೂರ್ಣ ಸತ್ಯವನ್ನು ಬಚ್ಚಿಟ್ಟು ಅರ್ಧ ಸತ್ಯವೇ ಪೂರ್ಣ ಸತ್ಯವೆಂದು ಪ್ರಚಾರ ಮಾಡಿದ್ದರ ದುಷ್ಪರಿಣಾಮವಿದ್ದು, ಇದರಿಂದಲೇ ಇಂಥ ಹೇಯ ಕೃತ್ಯ ಮಾಡಲು ಆ ಕೊಲೆಗಡಕನು ಸಿದ್ಧನಾದನು. ಒಂದು ವೇಳೆ ಆ ಕೊಲೆಗಡಕನ ವಿಚಾರಸ್ಮರಣೆಯು ಎಷ್ಟೇ ಯೋಗ್ಯವೆಂದು ಸಮರ್ಥಿಸಿದರೂ ಕೊಲೆಯಿಂದ ಯಾವದಾದರೂ ಕಾರ್ಯ ಸಾಧಿಸುವದೆಂದು ತಿಳಿಯುವದು ಹೇಡಿತನವೇ ಸರಿ. ಮೇಲಾಗಿ ಕೊಲೆಗೆ ಗುರಿ ಮಹಾತ್ಮರಾಗಬಲ್ಲರೇ? ಇದೆಂಥ ಹುಚ್ಚುತನವು! ತಾಯಿಯನ್ನು ಕೊಂದು ಮಗುವು ಹಾಲು ಬಯಸಿದಂತೆ! ಯಾವದಾದರೊಂದು ತತ್ವದ ಪ್ರಚಾರವಾಗಿ ಅದು ರೂಢಿಯಲ್ಲಿ ಪರಿಣಮಿಸುವದು. ಮುಂದೆ ಸೂತ್ರಧಾರರು ಆ ನಿಯಮಗಳು ಅಡ್ಡಬಂದರೆ ಅದಕ್ಕೆ ಅಪವಾದಗಳನ್ನು ಹುಟ್ಟಿಸುವರು. ಆದರೆ ಪೂರ್ಣ ವಿಚಾರ ಮಾಡುವವನು ಎಲ್ಲವನ್ನು ಸಮದೃಷ್ಟಿಯಿಂದ ನೋಡುವನು. ಜಾತಿಪಂಥದಲ್ಲಿ ಭೇದ ಕಾಣಿಸುವದಿಲ್ಲ. ಆದರೆ ಜನರಕೂಡ ಸಂಸ್ಕಾರಗಳ ಮೂಲಕ ಆ ಭೇದಗಳೇ ಸರ್ವಸ್ವವೆಂದು ತಿಳಿದು ಅವುಗಳಿಗಾಗಿ ಕೊಲೆ ಮಾಡಲು ಹಿಂಜರಿಯುವದಿಲ್ಲ.

೨-೨-೪೮:— ಸಾಧಾರಣವಾಗಿ ನಿನ್ನಿನ ತನಕ ನೋಡುತ್ತಿರಲಾಗಿ ಈ ಕೊಲೆಯು ವೈಯಕ್ತಿಕ ಸ್ವರೂಪದ್ದಿದೆಯೋ ಹೇಗೆ ಎನ್ನುವ ಸಂಶಯವಿದ್ದು, ನಿನ್ನಿನ ಪತ್ರದ ಮೇಲಿಂದ ಹಿಂದುಸ್ತಾನವು ಇಬ್ಭಾಗವಾಗಿ ಅದರಲ್ಲಿ ಈ ಕೊಲೆಯ ಆರೋಪವು ಒಂದು ಭಾಗದ ಮೇಲೆ ಆಯಿತು. ಇದರಿಂದ ಕಂಡುಬಂದದ್ದೇನೆಂದರೆ, ಈ ಇಬ್ಬಣಗಳಲ್ಲೂ ಯುದ್ಧ ಸಾರಿದಂತಾಯಿತು. ಆದರೆ ಇದರಲ್ಲಿ ಇಬ್ಬಣಗಳಲ್ಲೂ ಸಂಧಿ ಮಾಡುವವರನ್ನು ಕೊಲೆ ಮಾಡಿದ್ದು ಶುದ್ಧ ಮೂರ್ಖತನವಾಯಿತು. ಆದರೆ ಎರಡು ಪಂಗಡಗಳಲ್ಲಿ ಯಾರು ಯಾರಿಗೆ ವೈರಿಗಳಿರುವರೋ ಅವರನ್ನು ಕೊಲ್ಲುವದು ಯೋಗ್ಯವಿತ್ತು. ಕೊಲೆಗಡಕನು ಮೊದಲೇ ತನ್ನ ಪತ್ರಿಕೆಯ ಮೇಲಿಂದ ಮ.ಗಾಂಧಿಯವರಿಗೆ ಬೆಂಗಾವಲಿಡುವದು ಹಿಂದುಸ್ತಾನ ಸರಕಾರಕ್ಕೆ ಯೋಗ್ಯವೆಂದು ಎಚ್ಚರಿಕೆ ಕೊಟ್ಟಿದ್ದಾನೆ. ಮಹಾತ್ಮರನ್ನು ಈ ಸನಾತನಿಗಳೇ ಹಿಂದೊಮ್ಮೆ ಕೊಲೆಮಾಡಲು ಯತ್ನಿಸಿದ್ದರು. ಅಂದೇ ಆವಗ ಕೊಲೆಯಾಗಿದ್ದರೆ ಆ ಮಾತಿಗೆ ಎಷ್ಟೋ ದಿನವಾಗುತ್ತಿತ್ತು. ಸರಕಾರದವರು ಇದನ್ನು ತಿಳಿದು ಮೊದಲೇ ಎಚ್ಚರಾಗಿದ್ದರೆ ಒಳ್ಳೆಯದಾಗುತ್ತಿತ್ತು. ಆದರೆ ಇದು ಸರಕಾರಕ್ಕೆ ಧರ್ಮಸಂಕಟವಾಗಿದ್ದಿತು, ಮಹಾತ್ಮರು ಬೆಂಗಾವಲಿಟ್ಟರೆ ತಾವೇ ಉಪವಾಸಬಿದ್ದು ಸಾಯುತ್ತೇವೆಂದು ಹೇಳುತ್ತಿದ್ದರು. ಮತ್ತು ತಮ್ಮಿಂದ ಕಾರ್ಯವಾಗಬೇಕಾಗಿದ್ದರೆ ತಮಗೆ ಯಾವ ಧಕ್ಕೆಯೂ ಆಗುವದಿಲ್ಲ. ತಾವು ಮಾಡಿದ ಕೆಲಸವು ಸಾಕಾಗಿದ್ದರೆ ತಮಗೆ ಏನಾದರೂ ಅನಾಹುತವಾಗುವದೆಂದು ಹೇಳಿದ್ದರು. ಈ ಎಲ್ಲ ಸಂಗತಿಗಳ ಅಭ್ಯಾಸಮಾಡಿ ನೀತಿ, ಅನೀತಿ, ಜಗದ ವ್ಯವಹಾರ ಹೇಗೆ ನಡೆದಿದೆ ಇದರ ಉಪಯೋಗವನ್ನು ಹೆಣ್ಣುಮಕ್ಕಳ ಏಳಿಗೆಗಾಗಿ ಮಾಡಿಕೊಳ್ಳುವ ದೃಷ್ಟಿಯಿಂದ ವಿಚಾರಿಸುವದು ಬಹಳ ಅಗತ್ಯವಿದೆ.

೩-೨-೪೮:— ಯಾವಾಗಿದ್ದರೂ ಪ್ರಚಾರಕರಿದ್ದವರಿಗೆ ಅಥವಾ ಒಂದು ಧ್ಯೇಯಕ್ಕೆ ಅಂಟಿಕೊಂಡಿರುವವರಿಗೆ ತಮ್ಮಗುರಿ ಹಿಂದೆ ಕಾಣಿಸುತ್ತಿರುತ್ತದೆ. ಇದು ಏಕಾಂಗಿ ಇದ್ದವರಿಗಾಯಿತು. ಮ. ಗಾಂಧಿಯವರು ಸ್ವತಂತ್ರ ವಿಚಾರಿಗಳಿದ್ದುದರಿಂದ ಅವರಿಗೆ ಎಲ್ಲದರ ಕಡೆಗೂ ಲಕ್ಷ್ಯವಿತ್ತು.

ಬೇರೆಬೇರೆಯುವರು ಕೇಳುವ ಪ್ರಶ್ನೆಗಳಿಗೆ ಸಮಂಜಸ ಉತ್ತರ ಕೊಡುತ್ತಿ
ದ್ದರು. ಕಾರ್ಲ ಮಾರ್ಕ್ಸನು ಬೇರೆ ಬೇರೆ ವಿಷಯಗಳ ವಿಚಾರ ಮಾಡಿ
ಹೇಳಿದ್ದೇನೆಂದರೆ ರೊಕ್ಕ ಗಳಿಸುವ ಪದ್ಧತಿಯಿಂದಲೇ ಎಲ್ಲ ವ್ಯವಹಾರಗಳ
ಪದ್ಧತಿಗಳು ಬಿದ್ದಿರುತ್ತವೆ. ಸಮಾಜದ ಪರಿಸ್ಥಿತಿಯೆಲ್ಲವೂ ರೊಕ್ಕವನ್ನು
ಅವಲಂಬಿಸಿದೆ. ಶ್ರೀಮಂತಿಕೆಯಿಂದಲೇ ಎಲ್ಲ ವ್ಯತ್ಯಾಸವಾಗಿದೆ. ಇತಿಹಾಸ
ದಲ್ಲಿ ಸಂಗತಿಗಳ ಪುನರಾವೃತ್ತಿ ಕಂಡು ಬರುತ್ತದೆ. ಅದರಲ್ಲಿ ರಾಜರುಗಳದ್ದಾ
ಗಲೀ ಅಥವಾ ಪ್ರಮುಖ ವ್ಯಕ್ತಿಗಳ ಗುಣದೋಷಗಳು ವಿವೇಚಿಸಲ್ಪಟ್ಟಿರು
ತ್ತವೆ. ಆದರೆ ಮಹಾತ್ಮಾಜಿಯಂಥವರಾಗಲೀ, ಕಾರ್ಲ ಮಾರ್ಕ್ಸರಂಥವರಾ
ಗಲೀ, ವ್ಯಕ್ತಿಗಳ ದೋಷಗಳನ್ನೆಣಿಸದೆ, ಯಾವ ಪದ್ಧತಿಯ ಮೂಲಕ ವ್ಯಕ್ತಿ
ಗಳಲ್ಲಿ ಅಥವಾ ಸಮಾಜದಲ್ಲಿ ಯಾವ ದೋಷಗಳು ಉಂಟಾಗುತ್ತವೆ ಎಂಬ
ದನ್ನು ಹೇಳುತ್ತಿರುವರು. ಮತ್ತು ವ್ಯಕ್ತಿಗಳನ್ನು ತಿದ್ದಲು ಪ್ರಯತ್ನಿಸದೆ ಪದ್ಧತಿ
ಗಳನ್ನು ತಿದ್ದಲು ಯತ್ನಿಸುತ್ತಿರುವರು. ಆದರೆ ಸಾಮಾನ್ಯ ಜನರು ಇವೆಲ್ಲ
ಪದ್ಧತಿಯ ದೋಷಗಳಿರದೆ ವ್ಯಕ್ತಿಗಳದ್ದೇ ದೋಷವೆಂದು ತಿಳಿದು, ತಮ್ಮ
ಪರಿಸ್ಥಿತಿಯಲ್ಲಿ ಬದಲಾಗಬೇಕೆಂಬ ಆಶೆಯಿಂದ ವ್ಯಕ್ತಿಗಳನ್ನೇ ಕೊಲ್ಲಲು
ಯತ್ನಿಸುತ್ತಿರುವರು. ಇದರಿಂದ ದುಃಖನಿವಾರಣೆಯಾಗದೆ, ತಾತ್ಪೂರ್ತಿಕ
ವಾಗಿ ಕೆಲವೊಂದು ದುಃಖಗಳು ಹಿಮ್ಮೆಟ್ಟಿದಂತೆ ಕಂಡರು ಅದು ಮುಂದೆ
ಇಮ್ಮಡಿಯಾಗುವದು.

೩—೨—೪೮:— Habit is second nature ಎಂಬಂತೆ ಮಹಾ
ತ್ಮರಂಥವರು ಮಾನವೀಯ ಸಂಸ್ಕಾರದ ಉಚ್ಚಶಿಖರವನ್ನು ಮುಟ್ಟುವರು.
ಇದು ಸಾಮಾನ್ಯ ಜನರಿಗೆ ತಿಳಿಯದೆ ಅವರು ಮೊದಮೊದಲು ಎಲ್ಲರನ್ನು
ತಮ್ಮಂತೆಯೇ ತಿಳಿದರೂ, ಪ್ರಯತ್ನಬಲದಿಂದ ತಮ್ಮ ಕಡೆಯಿಂದಾಗದ
ಕೆಲಸಗಳನ್ನು ಮತ್ತೊಬ್ಬರು ಮಾಡಿದ್ದು ಕಂಡಲ್ಲಿ ಅವರನ್ನು ವಿಭೂತಿಗ
ಳೆಂದು ಗಣಿಸುವರು ಮತ್ತು ಅಸಾಧಾರಣ ತೇಜಸ್ಸು ಕಂಡಲ್ಲಿ (ತಮ್ಮಿಂದಾ
ಗದ ಕೆಲಸ ಮಾಡಿ ತೋರಿಸಿದರೆ) ದೇವರೆಂದು ತಿಳಿಯಲು ಸಹ ಹಿಂಜರಿ
ಯುವದಿಲ್ಲ. ತಂಪುದೇಶದೊಳಗೆ ಜನರು ಕೆಂಪಗೂ, ಬಿಸಿಲುದೇಶದೊಳಗೆ
ಜನರು ಕಪ್ಪಾಗಿಯೂ ಆಗುತ್ತಿರುತ್ತಾರೆ. ಹೀಗಾಗಲು ಕಾರಣವೇನೆಂದರೆ

ಅಲ್ಲಲ್ಲಿಯ ಹವಾಮಾನವನ್ನು ತಡೆದುಕೊಳ್ಳುವ ಶಕ್ತಿ ಅಲ್ಲಿಯವರಿಗೆ ಬರಬೇಕೆಂದು ಸೃಷ್ಟಿಯಲ್ಲಾಗುತ್ತಿರುವ ಬದಲಾವಣೆಗಳಿವು. ಹೀಗೆ ಸೃಷ್ಟಿ ನಿಯಮದಲ್ಲಿ ಬದಲಾಗುತ್ತಿರುವಾಗ ಮನುಷ್ಯನು ತನ್ನ ಬುದ್ಧಿಶಕ್ತಿಯಿಂದ ಸೃಷ್ಟಿನಿಯಮವನ್ನೇ ಬದಲಿಸಲು ಪ್ರಯತ್ನಿಸುತ್ತಿದ್ದಾನೆ. ಬದಲಾಯಿಸಿದ ನಿಯಮಗಳಂತೆ ತಾನು ನಡೆಯುವನಲ್ಲದೆ ತನ್ನ ಬುದ್ಧಿಬಲದಿಂದ ಎರಡನೆಯವರಿಗೆ ನಡೆಯಹಚ್ಚುವನು. ಇದರ ನಿಮಿತ್ತ ಜಾತಿ, ಪಂಥ, ಧರ್ಮ, ಸಂಘ ದೇಶಕೋಶಗಳಾಗಿ. ಈ ಮಾನವೀಪ್ರಪಂಚ ಹುಟ್ಟಿರುವದು. ಇದ್ದದ್ದು ಚಲೋ, ಆಗತಕ್ಕದ್ದು ಕೆಟ್ಟ. ಆದರೆ ಇದ್ದದ್ದರೊಳಗಿಂದ ಆಗತಕ್ಕದ್ದು ಹುಟ್ಟುತ್ತದೆಂದು ಸಾಮಾನ್ಯರು ತಿಳಿಯುವರು. ಮ. ಗಾಂಧಿಯವರು ಜಗತ್ತಿನಲ್ಲಿಯ ಎಲ್ಲ ಮನುಷ್ಯರ ಕಲ್ಯಾಣದ ವಿಚಾರಮಾಡಿ ಅದರ ಪ್ರಶ್ನೆ ಬಿಡಿಸಲು ಎತ್ನಿಸುತ್ತಿರುವದರಿಂದ ಜನರು ಅವರಿಗೆ ಮಹಾತ್ಮರೆನ್ನುತ್ತಾರೆ. ಜಗತ್ತಿನಲ್ಲಿ ಬಹು ಜನರೆಲ್ಲರೂ ಯಾವದಾದರೂ ಒಂದೇ ವಿಷಯದಲ್ಲಿ ತಜ್ಞರಾಗಿರುತ್ತಾರೆ. ಬಾಕಿ ವಿಷಯ ಅವರಿಗೆ ತಿಳಿಯುವುದಿಲ್ಲ. ಆದರೆ ಮ. ಗಾಂಧಿಯವರು ವಿಶ್ವವನ್ನು ತಿರುಗಿ ಎಲ್ಲ ವಿಷಯಗಳನ್ನು ಅಭ್ಯಾಸ ಮಾಡಿರುವದರಿಂದ ಎಲ್ಲ ವಿಷಯಗಳ ಸಲುವಾಗಿ ಅವರಲ್ಲಿ ಸಹಾನುಭೂತಿಯುಂಟು. ಮ. ಗಾಂಧಿಯವರ ಕೊಲೆಗಡಕನು ಸಾಮಾನ್ಯ ಮನುಷ್ಯನಿದ್ದು ಕೇವಲ ಹಿಂದು ಧರ್ಮದ ಸಲುವಾಗಿ ಏಕಾಂಗಿ ಅಭಿಮಾನ ತಾಳುವ ಆಕುಂಚಿತ ದೃಷ್ಟಿಯುಳ್ಳ ಒಂದೇ ವಿಷಯದ ಕಡೆಗೆ ಹೆಚ್ಚು ಗಮನಕೊಟ್ಟು ಅದರ ಸಲುವಾಗಿ ಹೋರಾಡುತ್ತಿರುವದರಿಂದ ಅವನಿಗೆ ಅವರನ್ನು ಕೊಲೆ ಮಾಡುವ ಪ್ರೇರಣೆಯಾಯಿತು.

ಮ. ಗಾಂಧಿಯವರು ಮಾನಸಶಾಸ್ತ್ರಜ್ಞರಿದ್ದುದರಿಂದ ಅವರು ಕೊಲೆಗಡಕನಿಗೆ ಕ್ಷಮೆ ಮಾಡುವಷ್ಟು ಉದಾರ ಹೃದಯಿಗಳಾದರು. ಆದ್ದರಿಂದ ಜಗತ್ತಿನಲ್ಲಿ ನಡೆಯುವ ಎಲ್ಲ ಕೆಲಸಗಳು ಬಹುತೇಕ ಆ ಆ ಪರಿಸ್ಥಿತಿಗನುಸರಿಸಿ ನಡೆಯುತ್ತಿರುತ್ತವೆ. ಮಹಾತ್ಮರು ಮಾನವೀ ಸಂಸ್ಕೃತಿಯ ಉಚ್ಚ ಮೆಟ್ಟಲನ್ನೇರಿದವರಿದ್ದರೆ ಶ್ರೀ ಗೋಡಸೆ ಇವನು ಪಶುವೃತ್ತಿಯ ಮೆಟ್ಟಲದಲ್ಲಿಯೇ ಇರುವನೆಂದೆನ್ನಲಡ್ಡಿಯಿಲ್ಲ. ಈ ಪ್ರಪಂಚದಲ್ಲಿ ಒಬ್ಬರು ಸಂಸ್ಕೃತಿಯ ಒಂದು ದಂಡೆಗೇರಿ ಎಷ್ಟೋ ಕೀರ್ತಿವಂತರಾಗಿ ಸ್ವರ್ಗವನ್ನು

ಕಂಡರೆ ಮತ್ತೊಬ್ಬರು ಅಧಃಪಾತಕ್ಕೆ ಇಳಿಯುವರು. ಹೀಗೆ ಪ್ರಪಂಚದಲ್ಲಿ ಸಂಸ್ಕೃತಿಗಳ ನಿಮಿತ್ತ ವ್ಯತ್ಯಾಸವು ಕಂಡುಬರುತ್ತದೆ.

೫-೨-೪೮:— ಇದರಲ್ಲಿ ಜ್ಞಾನದ ಮಹತ್ವ ತಾತ್ವಿಕ ದೃಷ್ಟಿಯಿಂದಿರುತ್ತದೆ. ಹೆಚ್ಚಿಗೆ ಅಭ್ಯಾಸ ಮಾಡಿದಂತೆ ಜ್ಞಾನವು ಹೆಚ್ಚಾಗುತ್ತದೆ. ಜ್ಞಾನ ಹೆಚ್ಚಾದಂತೆ ವಿಚಾರ ವಿಸ್ತೃತವಾಗುತ್ತದೆ. ವಿಚಾರ ವಿಸ್ತೃತವಾದಂತೆ "ವಸುಧೈವ ಕುಟುಂಬಕಂ" ಎನ್ನುವ ಬುದ್ಧಿಯು ಬರುತ್ತದೆ. ಎರಡನೆಯವರಿಗೂ ಸಹ ತನ್ನಂತೆಯೇ ಕಲ್ಯಾಣವಾಗಬೇಕೆನ್ನುವನು ಉತ್ತಮನು. ತನ್ನ ದೇಶಕ್ಕಷ್ಟೇ ಕಲ್ಯಾಣವಾದರೆ ಸಾಕೆನ್ನುವನು ಮಧ್ಯಮನು. ತನ್ನೊಬ್ಬನ ಲಾಭವಾದರೆ ಸಾಕೆನ್ನುವನು ಅಧಮನು. ತನ್ನ ಸ್ವಾರ್ಥಕ್ಕಾಗಿ ಬೇರೆಯವರಿಗೆ ಹಾನಿಮಾಡಹೊರಟವನು ಅಧಮಾಧಮನು ಎನ್ನಿಸಿಕೊಳ್ಳುವನು. ಸ್ವಾರ್ಥ ಇಲ್ಲದಂತೆ ಸೋಗನ್ನು ಹಾಕಿಕೊಂಡು ತನ್ನ ಸ್ವಾರ್ಥಕ್ಕಾಗಿಯೇ ಒಳಗೊಳಗೆ ಹೆಣಗುವವನು, ತನ್ನ ಸ್ವಾರ್ಥ ಸಾಧನೆಗಾಗಿ ಹೆಚ್ಚು ಹೆಚ್ಚು ವಿಚಾರ ಮಾಡುವನು. ನಿಜವಾಗಿ ಸೃಷ್ಟಿನಿಯಮಗಳಾವವು? ಮನುಷ್ಯಕೃತ ನಿಯಮಗಳಾವವು? ಇದನ್ನು ವಿಂಗಡಿಸಲು ಯತ್ನಿಸಬೇಕು. ಸೃಷ್ಟಿನಿಯಮದ ಭಂಗವು ತಿಳಿದು ಅಥವಾ ತಿಳಿಯದೆ ಸ್ವಲ್ಪಾದರೂಸಹ ಆದಲ್ಲಿ ಶಿಕ್ಷೆಯಾಗದೆ ಬಿಡದು. ಮನುಷ್ಯಕೃತ ನಿಯಮಗಳು ಮನುಷ್ಯನ ಬುದ್ಧಿಪ್ರಭಾವದಿಂದ ಹುಟ್ಟಿದ್ದರಿಂದ ಅವುಗಳ ಅರಿವೆಂದರೆ, ಜ್ಞಾನ-ಅಜ್ಞಾನದಿಂದ ಅವುಗಳಲ್ಲಿಯು ದೋಷಗಳು ಕಂಡುಬರುವವು. ಮತ್ತು ಅವು ಸದೋಷವಿರುವದರಿಂದ ಅವುಗಳ ಭಯ. ಶಿಕ್ಷೆ ಹೇಗೆ ತಪ್ಪಿಸಲು ಬರುವುದೆಂದು ಗೊತ್ತಾಗುತ್ತದೆ. ಇದಕ್ಕೇನೇ ವ್ಯವಹಾರಜ್ಞಾನವೆನ್ನುತ್ತಾರೆ. ಈ ವ್ಯವಹಾರ ಜ್ಞಾನವು ಹೆಚ್ಚಾಗಿದ್ದವನು ಜಾಣ. ಇದರ ಅರಿವಿಲ್ಲದವನು ದಡ್ಡ ಹಾಗೂ ಅಜ್ಞಾನಿ. ಇಂಥವರನ್ನು ಸುಲಿದು ರೊಕ್ಕ ಗಳಿಸುವವರು ಶ್ರೀಮಂತರು. ಈ ರೊಕ್ಕದೊಳಗಿಂದ ಕೆಲವೊಂದು ಭಾಗವನ್ನು ತಮ್ಮ ದೋಷ ಮುಚ್ಚುವ ಸಲುವಾಗಿ ತೋರಿಕೆಯ ಜನಹಿತಕಾರ್ಯ ಮಾಡಿದವರು ದಾನಶೂರರು. ಈ ದಾನಶೂರರನ್ನು ಹೊಗಳುವವರೇ ಕವಿಗಳು, ಭಂಟರು, ಈ ತೆರನಾಗಿ ಈ ಪ್ರಪಂಚಚಕ್ರವು ಸಾಗಿದೆ. ಈ ಅಜ್ಞಾನದ ಉಪಯೋಗವನ್ನು ಸ್ವಾರ್ಥಕ್ಕೆ ಮಾಡಿಕೊಳ್ಳುವವರನ್ನು ತಡೆಗಟ್ಟಿ ನಿಯಮಗಳ ಉದ್ದೇಶ

ವನ್ನರಿತು ಅದರಂತೆ ನಡೆಯುವವರೇ ಮಾನವನ ಹಿತೈಷಿಗಳು! ಇವರೇ ಮಹಾತ್ಮರು!

ಈ ಜ್ಞಾನಬಲದಿಂದ ಯಾರಲ್ಲಿ ಪ್ರಪಂಚದ ಸಲುವಾಗಿ ತಿರಸ್ಕಾರ ಹುಟ್ಟಿ ಈ ಪ್ರಪಂಚವನ್ನು ತ್ಯಾಗಮಾಡಿ ಸನ್ಯಾಸವ್ರತದಿಂದ ಗುಡ್ಡಗಾಡಿನೊಳಗೆ ಇದ್ದು ತಪಸ್ಸು ಮಾಡುತ್ತಾರೋ ಅವರು ಜ್ಞಾನಿಗಳು. ಅಥವಾ ತಪಸ್ವಿಗಳು. ಏನೂ ತಿಳಿಯದೆ ಈ ಲೌಕಿಕ ನಿಯಮಗಳ ಸಂಸ್ಕಾರ ಹೊಂದದೆ ಅಂದರೆ ಶಿಕ್ಷಣ ಹೊಂದದೆ ಇರುವವರು ಈ ಪ್ರಪಂಚದೊಳಗಿನ ಹುಳುಗಳು. ಇಂಥವರಿಂದಲೇ ಈ ಪ್ರಪಂಚದ ಬಹುಭಾಗವು ತುಂಬಿದೆ.

೬-೨-೪೫:— ವಿದ್ಯೆಯಿಂದ ಸಂಸ್ಕಾರಗಳಾಗುವಂತೆ ಮನುಷ್ಯನು ತನ್ನ ಸ್ವಾರ್ಥದ ಸುತ್ತಲೂ ಬೇರೆ ಬೇರೆ ಪರಿಸ್ಥಿತಿಯನ್ನು ನಿರ್ಮಾಣಮಾಡಿಕೊಂಡಿರುತ್ತಾನೆ. ಕೆಲವೊಂದು ಸಾರೆ ಪರಿಸ್ಥಿತಿಯೇ ಮನುಷ್ಯನನ್ನು ಬದಲುಮಾಡುತ್ತದೆ. ಇದರಿಂದಲೇ ಜನರ ಮತಾಮತಗಳಲ್ಲಿ ಭೇದ ತಾಕಲಾಟ, ಸ್ವಾರ್ಥ, ಪರಮಾರ್ಥಗಳು ಕೂಡಿ ಹೋಗುತ್ತವೆ. ಸೃಷ್ಟಿನಿಯಮದ ವಿರುದ್ಧ ಅದನ್ನು ಬಿಟ್ಟು ಹೋಗುವದು ಕಠಿಣ. ಅದರಲ್ಲಿ ಸ್ಥಿತಿಸ್ಥಾಪಕತ್ವವೂ ಹೆಚ್ಚಾಗಿರುತ್ತದೆ. ಮತ್ತು ಅದರ ವಿರುದ್ಧ ಹೋದರೆ ದೇಹಕ್ಕಾದರೂ ಹಾನಿಯಾಗುತ್ತದೆ. ಪ್ಲೇಗು ಬರಬಾರದೆಂದು ಕೃತ್ರಿಮರೀತಿಯಿಂದ ಇನಾಕ್ಯುಲೇಷನ್ ಮಾಡಿಸಿಕೊಳ್ಳುತ್ತಾರೆ.ಇದರಿಂದ ನಮ್ಮ ಆಹಾರ ವಿಹಾರಗಳಲ್ಲಿಯ ತಪ್ಪುಗಳಿಂದ ಬರತಕ್ಕ ಪ್ಲೇಗವು ಬೇರೆ ಹಾದಿ ಹಿಡಿದು ಪ್ಲೇಗದ ಸ್ವರೂಪ ಬಿಟ್ಟು ಬೇರೆ ಬೇನೆಯ ಸ್ವರೂಪ ಹೊಂದುವವರೆಗೆ ಹತ್ತುವ ಕಾಲಾಪವ್ಯಯವೆಂದರೆ ಪ್ಲೇಗನ್ನು ತಡೆಹಿಡಿಯೋಣವೆಂಬರ್ಥ.

ಈ ರೀತಿ ನೋಡುತ್ತ ಹೋದರೆ ಮಹಾತ್ಮರನ್ನು ಕೊಲೆ ಮಾಡಿದ ಗೋಡಸೆಯ ವಿಷಯಕ್ಕಾದರೂ ಹೇಳಬಹುದು. ರಾಮನ ಕೀರ್ತಿ ಬೆಳೆಯಬೇಕಾದರೆ, ಅವನ ಚರಿತ್ರೆ ಬರೆಯಬೇಕಾದರೆ ರಾವಣನು ಹೇಗೆ ಅವಶ್ಯಕ ವಸ್ತುವಾದನೋ ಹಾಗೆ ಮಹಾತ್ಮರ ಚರಿತ್ರ! ಅವರ ಗುಣ ಕಥನ ಮಾಡಬೇಕಾದರೆ ಗೋಡಸೆಯ ಉಪಯೋಗ ಬಹಳವಿದೆ. ಈ ತೆರನಾಗಿ ಪ್ರಪಂಚ

ದಲ್ಲಿ ಸ್ವಾರ್ಥದ ಉಪಯೋಗ ಪರಮಾರ್ಥಕ್ಕಾಗುವದು. ಪರಮಾರ್ಥದ ಉಪಯೋಗ ಸ್ವಾರ್ಥಕ್ಕಾಗುವದು. ಒಟ್ಟಾರೆ ಸ್ವಾರ್ಥ ಪರಮಾರ್ಥ ಕೂಡಿಯೇ ಒಂದು ವರ್ತುಳವಾಗುತ್ತದೆ. ಹಿಂದೆ ಯಾರನ್ನು ಧರ್ಮಗುರು ವೆಂದು ಆನೆಯ ಮೇಲೆ ಕೂಡಿಸಿ ಮೆರವಣಿಗೆ ಮಾಡಿಸಿದರೋ ಅವರನ್ನೇ ಈಗ ರಾಷ್ಟ್ರಘಾತುಕರೆಂದು ಕಾಲಿನಿಂದ ತುಳಿಯುವ ಪ್ರಸಂಗ ಬರುತ್ತದೆ. ಇದಕ್ಕೆ ಕಾರಣವೇನೆಂದರೆ, ಪ್ರತಿಯೊಂದು ವ್ಯಕ್ತಿಯು ತನ್ನ ವಿಚಾರದ ಉತ್ಕಟತೆಯ ಪ್ರಭಾವದಂತೆ ಇತರ ಜನರನ್ನು ತನ್ನ ಕಡೆಗೆ ಸೆಳೆದುಕೊಳ್ಳು ವನು. ವ್ಯಕ್ತಿ ವ್ಯಕ್ತಿ ಕೂಡಿ ಸಮುದಾಯವಾಗುವದು. ಆ ಸಾಮುದಾಯಿಕ ವಿಚಾರಗಳಿಂದ ಒಂದು ಶಕ್ತಿಯು ನಿರ್ಮಾಣವಾಗುವದು. ಆ ವಿಚಾರಶಕ್ತಿ ಯಿಂದಲೇ ಹೊಸ ವಿಚಾರಗಳು ಹುಟ್ಟುವವು. ಇದರಿಂದ ಹೊಸ ಹಳೆ ವಿಚಾರಗಳಲ್ಲಿ ತಾಕಲಾಟ ಉಂಟಾಗುವದು. ಒಮ್ಮೆ ವೈಭವ ಶಿಖರಕ್ಕೇರಿ ದವರನ್ನು ಕೆಳಗೆ ಎಳೆಯಲು ಪ್ರಯತ್ನವಾಗುವದು. ಈ ಪ್ರಯತ್ನಗಳೆಂದರೆ ವಿವಿಧತೆರನಾದ ಪ್ರಯೋಗಗಳೆಂದು ಹೇಳಲಡ್ಡಿಯಿಲ್ಲ. ಎಂಥ ಕ್ರೂರಕೃತ್ಯ ಗಳನ್ನು ಮಾಡಿದರೂ ಸಹ ಆ ಎಲ್ಲ ಕೊಲೆಪಾತಕತನದ ಅಪರಾಧಗಳನ್ನು ಮರೆತು ಮಹಾತ್ಮರು ಕ್ಷಮಿಸಿದರು. ಇದರಿಂದ ಮಹಾತ್ಮರ ಗುಣಕ್ಕೆ ಮೆರಗು ಕೊಟ್ಟಂತಾಗಿದೆ. ಮಹಾತ್ಮರು ಹೇಗೆ ಜನರ ಹಿತಕ್ಕಾಗಿ ಮಡಿದರೋ ಹಾಗೆ ಗೋಡಸೆಯೂ ಸಹ ಜನರ ಕಲ್ಯಾಣಕ್ಕಂತೇ ಮಾಡಿದನು. ಆದರೆ ಮಹಾತ್ಮರು ತಮ್ಮ ದೃಷ್ಟಿಯನ್ನು ವಿಶಾಲವಾಗಿಟ್ಟುಕೊಂಡು ಸಾರಾ ಸಾರಾ ವಿಚಾರ ಮಾಡಿ ಅವರ ಪ್ರಯೋಗಕ್ಕೆ ಹೋದರೆ ತರುಣನಾದ ಗೋಡಸೆಯು ಸಣ್ಣ ಕ್ಷೇತ್ರದಲ್ಲಿ ಆಕುಂಚನ ದೃಷ್ಟಿಯಿಟ್ಟು ಹರಯದ ಮಬ್ಬಿನಲ್ಲಿ ತಾನೂ ಜನರ ಕಲ್ಯಾಣವನ್ನೇ ಮಾಡುವನೆಂಬ ಆಶೆಯಿಂದ ಮಹಾತ್ಮರ ಕೊಲೆ ಮಾಡುವ ಪ್ರಯೋಗ ಮಾಡಿದನು. ಇದರಿಂದ ಆಗತಕ್ಕ ಪರಿಣಾಮವನ್ನು ಭೋಗಿಸಿದನು.

೭-೨-೪೮ :— ಈ ಪ್ರಕಾರ ಒಂದೇ ಸವನೆ ಹೋರಾಟ ನಡೆದಾಗ ಮನುಷ್ಯನು ಇತರರಿಗೆ ಲಾಭನಷ್ಟಗಳು ಹೇಗಾಗುವದೆಂಬುದನ್ನು ನೋಡದೆ ತನ್ನ ಸ್ವಾರ್ಥ, ಧ್ಯೇಯ. ಅಥವಾ ಸಮಾನದ ಸಲುವಾಗಿ ಹೋರಾಡತ್ತಿರು

ತ್ತಾನೆ. ಎಷ್ಟೋ ಜನರು ಮ. ಗಾಂಧಿಯವರನ್ನು ದೇವರೆಂದು ಅನ್ನುತ್ತಿದ್ದರು. ಆದರೆ ಅವರನ್ನು ದೇವರು ಏಕೆ ಕಾಯಲಿಲ್ಲ? ಎಂದು ಕೇಳುತ್ತಾರೆ. ಆದರೆ ದೇವರು ತಾನು ಹುಟ್ಟಿಸುವಂತೆ ಎಲ್ಲ ಪ್ರಾಣಿಗಳನ್ನು ಹುಟ್ಟಿಸಿದನು. ಪ್ರಾಣಿಗಳಾಗಲಿ, ಇಡೀ ಸೃಷ್ಟಿಯಾಗಲಿ ಸುಸೂತ್ರವಾಗಿ ಸಾಗುವಂತೆ ಕೆಲವು ನಿಯಮಗಳನ್ನು ಮಾಡಿದ್ದಾನೆ. ಆ ನಿಯಮಗಳಿಗನುಸಾರವಾಗಿ ಬಾಳಿದರೆ ಆ ಪ್ರಾಣಿಯು ಬದಕುವದು. ಇಲ್ಲವೇ ಸಾಯುವದು. ಆ ಎಲ್ಲ ನಿಯಮಗಳು ತಮಗೆ ಸಾಧ್ಯಂತವಾಗಿ ತಿಳಿಯುವದು ಸಾಧ್ಯವಿಲ್ಲ. ತಿಳಿಯದೆ ನಾವು ನಿಯಮಭಂಗಮಾಡಿ ಸಾವಿಗೆ ತುತ್ತಾಗುತ್ತೇವೆಂದು ಸ್ವತಃ ಮಹಾತ್ಮರೇ, ಶ್ರೀಮಹಾದೇವ ದೇಸಾಯಿರು ಏಕೆ ಬೇಗನೆ ಸತ್ತರೆಂದು ಕೇಳಿದ್ದಕ್ಕೆ ಹೇಳಿರುವರು. ಪ್ರತಿಯೊಬ್ಬರಿಗೂ ಯಾವದೇ ಒಂದು ಕೆಲಸ ಮಾಡಲು ಒಂದು ಕಾರಣವಿದ್ದೇ ಇರುತ್ತದೆ. ಆದರೆ ಕೆಲವರು ನಾವು ನಮ್ಮ ಕೃತಿಗಳಿಗೆ ಬೇಕಾದ ಚಲೋ ಕೆಟ್ಟ ಹೆಸರಿಟ್ಟರೂ ದೇವರು ಕೇಳುವುದಿಲ್ಲ. ತಮ್ಮ ನಿಯಮಗಳನ್ನೇ ಅಮಲಿನಲ್ಲಿ ತರಲು ಕೆಲವರು ತಕ್ಕ ವಿಚಾರ ಮಾಡಿಯೂ ಕೆಲವರು ಅವಿಚಾರ ಮಾಡಿಯೂ ನಡೆಯುತ್ತಾರೆ. ಇದಕ್ಕೆ ನಮ್ಮಲ್ಲಿಯದೇ ಒಂದು ಉದಾಹರಣೆ ಕೊಡುವದೆಂದರೆ ಪ್ರತಿದಿನ ಸಾಯಂಕಾಲ ಪ್ರಾರ್ಥನೆಯ ಸಮಯದಲ್ಲಿ ನೀತಿಪರಶ್ಲೋಕಗಳನ್ನು ಪಾಠಮಾಡಿ ಹೇಳುವ ರೂಢಿ ಇದ್ದು ಅವುಗಳನ್ನು ಯಾವದೇ ಒಬ್ಬ ವಿದ್ಯಾರ್ಥಿನಿಯು ಅಭ್ಯಾಸ ಮಾಡದೇ ಇದ್ದಲ್ಲಿ ಅವರ ಸಲುವಾಗಿ (ಒಬ್ಬೊಬ್ಬರ ಸಲುವಾಗಿ) ೫. ೫. ನಿಮಿಷ ನಿಲ್ಲುವೆನೆಂದು ತೀ. ದಾ. ಇವರು ಹೇಳಿದರು. ಮತ್ತು ಆದರಂತೆ ಮೊನ್ನೆ ಕೆಲವು ಜನರು ಮಾಡಿಕೊಂಡು ಬರದ ಮೂಲಕ ತೀ. ದಾ ಇವರು ನಿಂತದ್ದಕ್ಕೆ ಎಷ್ಟೋ ಜನರು ವಾದಿಸಿದರು. ಉಪವಾಸ ಮಾಡುತ್ತೇವೆಂದರು. ಆದರೆ ಅವರು ವಿಚಾರ ಮಾಡಿ ಈ ಪರಿಸ್ಥಿತಿಯು ಬರಬಹುದೆಂಬ ಮುಂದಾಲೋಚನೆಯಿಂದ ಮೊದಲೇ ಶ್ಲೋಕ ಬಾಯಿಪಾಠ ಮಾಡಿದ್ದರೆ ಈ ಪ್ರಸಂಗವೇ ಬರುತ್ತಿರಲಿಲ್ಲ. ಆದಿಲ್ಲದಿದ್ದರೂ ಸಹ ತೀ. ದಾ. ಇವರು ನಿಂತ ಮೇಲಾದರೂ ಬುದ್ಧಿ ಬಂದು ಇನ್ನು ಮುಂದೆ ತಾವೆಂದೂ ಹೀಗೆ ಮಾಡದೆ ಪ್ರತಿದಿನ ಶ್ಲೋಕ ಬಾಯಿಪಾಠ ಮಾಡೇ ತೀರುತ್ತೇವೆಂಬ ಒಂದು ದೃಢ ಪ್ರತಿಜ್ಞೆ ಮಾಡಿದ್ದರೆ ಅದು ಒಂದು ಒಳ್ಳೇಯದಾಗುತ್ತಿತ್ತು. ಅದೇ

ಮುಂದೆ ತಮ್ಮ ಆಯುಷ್ಯದಲ್ಲಿ, ಪರೀಕ್ಷೆಯ ಕಾಲದಲ್ಲಿ ಉಪಯೋಗವಾಗುವದು. ಆ ಹಾದಿಯೆಲ್ಲವನ್ನೂ ಬಿಟ್ಟು ಅಜ್ಞಾನದಿಂದ, ಹೇಡಿತನದಿಂದ ನಾವು ಉಪವಾಸ ಮಾಡುತ್ತೇವೆಂದು ಹೇಳಿದರು. ಇದಕ್ಕೆಲ್ಲ ಅವರವರ ದೈಹಿಕ, ಮಾನಸಿಕ, ಅಧ್ಯಾತ್ಮಿಕ ಪರಿಸ್ಥಿತಿಗಳೇ ಕಾರಣ. ಇದು ಸಣ್ಣ ಕ್ಷೇತ್ರದ ಮಾತಾದರೂ ಸಹ ಇದರಂತೆ ದೊಡ್ಡ ಕ್ಷೇತ್ರಗಳಲ್ಲೂ ಸಹ ಆಗಿ ಅದು ದೊಡ್ಡ ಪ್ರಮಾಣದಲ್ಲಿ ಹೊರಬೀಳುವದು. ಮುಂದೆ ಆ ಚಿಕ್ಕವರೇ ದೊಡ್ಡವರಾಗಿ ತಮ್ಮ ತಮ್ಮ ಪರಿಸ್ಥಿತಿಗನುಸಾರವಾಗಿ ಬಂದ ಅಧಿಕಾರ, ಅನುಭವಜನ್ಯ ಜ್ಞಾನ ಇವುಗಳಿಗನುಸಾರವಾಗಿ ತನಗೆ ಒಪ್ಪಿಗೆಯಾದಂತೆ ತಿಳಿದಾಗಲಿ ತಿಳಿಯದೆ ಆಗಲಿ ನಡೆಯುವರು. ಪ್ರಯೋಗಗಳನ್ನು ಪ್ರತಿಯೊಂದು ವ್ಯಕ್ತಿಯು ಮಾಡುವನು, ಈ ಪ್ರಯೋಗಗಳೆಂದರೆ ಪ್ರಪಂಚ ಇಂದರೆ "ಸಂಸಾರೋಪಿ ತಥಾಪನಿತ್ಯಂ" ಎಂಬ ಅನುಭವ. ಇದರಲ್ಲಿ ಕಟ್ಟ, ಚಲೋ, ಲಾಭ, ನಷ್ಟ, ಮಹತ್ವ. ಮಹತ್ವವಿಲ್ಲದ್ದು ದೇವಸೃಷ್ಟಿಯಿಂದ ಯಾವುದಿಲ್ಲ.

೮-೨-೪೮ :— ವಿವಿಧರೀತಿಯಿಂದ ವಿವಿಧಪ್ರಯೋಗಗಳನ್ನು ಮನುಷ್ಯನು ತನ್ನ ಬುದ್ಧಿಶಕ್ತಿಗಳಿಂದ ಮಾಡುತ್ತಿರುತ್ತಾನೆ. ಅದರಲ್ಲಿ ಲಾಭಲುಕ್ಸಾನಗಳನ್ನ ನೋಡಿಕೊಂಡು ಮುಂದಿನ ಪ್ರಯೋಗ ಹೀಗೆ ಮನುಷ್ಯನ ಇಡೀ ಆಯುಷ್ಯವು ಪ್ರಯೋಗ ಮಾಡುವದರಲ್ಲೇ ಇರುತ್ತದೆ. ಇಡೀ ಜಗತ್ತಿನಲ್ಲಿ ಮಾನವೇತರ ಜಗತ್ತಿನಲ್ಲಿ ಮತ್ತು ಮಾನವ ಜಗತ್ತಿನಲ್ಲಿ ಬುದ್ಧಿಬಲದಿಂದ ನಡದಷ್ಟೇ ಪ್ರಯೋಗಗಳು ಮತ್ತು ಅನಾಹುತಗಳು, ನ್ಯಾಯ ಅನ್ಯಾಯ, ಚಲೋ ಕೆಟ್ಟದರ ಹಾವಳಿ ನಡೆದಿಲ್ಲ, ಮೊದಲು ಒಬ್ಬನ ತಲೆಯಲ್ಲಿ ಪಕ್ಷಿಗಳಂತೆ ನಮಗೇಕೆ ಹಾರಾಡಲು ಬರಬಾರದೆಂದು ವಿಚಾರ ಬಂದು ಕಡೆಗೆ ಪಕ್ಷಿಗಳಿಗೆ ರೆಕ್ಕೆಗಳಿರುವದರಿಂದ ಹಾರಲು ಸಾಧ್ಯವಾಗಿರುವದು, ಅದರಂತೆ ನಮಗೂ ಕೃತ್ರಿಮ ರೆಕ್ಕೆ ರಚಿಸಿದರೆ ಹಾರಲು ಬರಬಹುದೆಂದು ತಿಳಿದು ಎರಡು ಪಕ್ಕೆಗಳಿಗೂ ಎರಡು ಮೊರ ಕಟ್ಟಿಕೊಂಡು ಹಾರಲು ಪ್ರಯತ್ನಿಸಿದನು. ಮುಂದೆ ಆ ಪ್ರಯೋಗದ ಸಲುವಾಗಿ ಎಷ್ಟೋ ಜನರು ಅದನ್ನು ಮಾಡುವಾಗ ತಮ್ಮ ಪ್ರಾಣಗಳನ್ನು ಸಹ ಕೊಟ್ಟದ್ದಾರೆ. ಮುಂದೆ ಎಷ್ಟೋ

ದಿನಗಳ ಮೇಲೆ ಈ ತತ್ವದ ಮೇಲಿಂದಲೇ ವಿಮಾನದ ಶೋಧವಾಯಿತು. ಸ್ವಾಭಾವಿಕವಾಗಿ ಅನುಕೂಲ ಪರಿಸ್ಥಿತಿ ಇಲ್ಲದಿದ್ದಾಗ್ಯೂ ಸಹ ಅದು ಯಾವ ಕಾರಣದಿಂದ ಆಗುತ್ತದೆಂದು ವಿಚಾರ ಮಾಡಿ ಅದರ ಪ್ರಯೋಗ ಮಾಡ ಹೊರಟಾಗ ದೊಡ್ಡ ದೊಡ್ಡ ಪಂಡಿತರೂ ಸಹ ಆ ಪ್ರಯೋಗ ಮಾಡುವವ ರಿಗೆ ಮೂರ್ಖರೆಂದು ಹೆಸರಿಟ್ಟರು. ಹಿಂದೆ ಎಷ್ಟೋ ಜನರು ದೇವರನ್ನು ನಂಬಿ ಎಷ್ಟೋ ಕೆಲಸಗಳನ್ನು ಮಾಡಿದ್ದಾರೆ. ಮ. ಗಾಂಧಿಯವರಾದರೂ ದೇವರೇ ತಮಗೆ ಎಲ್ಲ ಕೆಲಸ ಮಾಡಲು ಪ್ರೇರಣೆ ಕೊಡುತ್ತಾನೆಂದು ಹೇಳಿ ತಮ್ಮ ಪ್ರಾಣವನ್ನು ತೊರೆಯುವ ವರೆಗೆ ದೇವರನ್ನು ನಂಬಿಯೇ ಇದ್ದರು. ಜಗದೊಳಗಿನ ವ್ಯತ್ಯಾಸಗಳನ್ನು ಕಂಡು ದೇವರಿಲ್ಲೆಂದು ಸ್ವತಂತ್ರ ವಿಚಾರ ಮಾಡುವವರು ಕೆಲವರು ರಕ್ತಾಭಿಸರಣ ಶೋಧವನ್ನು ಹಚ್ಚಿದವನು ನಾಸ್ತಿಕನೆಂದು ಅವರ ಛಲನೆ ಮಾಡಲು ಧರ್ಮಗುರುಗಳು ಸಹ ಹಿಂಜರಿ ಯಲಿಲ್ಲ. ಪ್ರಚಲಿತ ಮೂಢ ರೂಢ ಕಲ್ಪನೆಗಳು ಹೊಸ ಶೋಧಗಳು ಹಾಗೂ ಪ್ರಯೋಗಗಳಿಗೆ ಆತಂಕ ಮಾಡುತ್ತವೆ. ಆದರೂ ಜ್ಞಾನದ ಲಾಲಸೆಯಿಂದ ಪ್ರತ್ಯಕ್ಷ ಲಾಭ, ಉದಾಹರಣೆಯಿಂದ ಹೊಸ ಹೊಸ ಶೋಧ ಹಾಗೂ ದುಃಖ ಬೆಳೆಯುತ್ತ ನಡೆದುದಕ್ಕೆ ಪೂರ್ವ ಸಂಸ್ಕಾರಗಳೇ ಕಾರಣ. ಜೀವನವು ದಿನೇ ದಿನೇ ತೊಡಕಿನದಾಗಿದೆ. ಈ ಶಾಸ್ತ್ರೀಯ ಶೋಧಗಳಿಂದ ದೇವರಲ್ಲಿ ಭಕ್ತಿ ಕಡಿಮೆಯಾಗುವದೋ ಎಂಬ ಭಯದಿಂದ ಅವರು ಶಿಕ್ಷೆ ಮಾಡಲು ಹಿಂಜರಿಯುವುದಿಲ್ಲ. ಯಾವದೇ ಕೆಲಸವು ದೇವರನ್ನು ನಂಬಿ ಕುಳಿತರೆ ಆಗಲಾರದು. ಸ್ವಪ್ರಯತ್ನವು ಇರಬೇಕು. ಯಾವದೇ ಒಂದು ಕೆಲಸಕ್ಕೆ ಅಂಟಿಕೊಂಡು ನಿಷ್ಠೆಯಿಂದ ಕೆಲಸ ಮಾಡಿದಲ್ಲಿ ಆ ಕೆಲಸವು ಕೈಗೂಡುವದೆಂಬ ಕಲ್ಪನೆಗಳಿಂದ ಕೆಲವರು ತಮಗನಿಸಿದಂತೆ ಪ್ರಯೋಗ ಗಳನ್ನು ಮಾಡುವರು. ಸೂರ್ಯನು ಬೆಳಕು ಕೊಡುವನೆಂದು ಅವನನ್ನು ಪೂಜಿಸುತ್ತೇವೆ. ಆದರೆ ಹಾವು ನಮ್ಮನ್ನು ಹೆದರಿಸುತ್ತದೆಂದು ಅದನ್ನು ನಾವು ಕೊಲ್ಲುತ್ತೇವೆ. ಈಗೀಗ ಎಷ್ಟೋ ಪ್ರಯೋಗಗಳನ್ನು ಮಾಡಿ ಶಾಸ್ತ್ರಜ್ಞರು ಹಾವಿನ ಉಪಯೋಗವನ್ನು ಹುಡುಕಿ ತೆಗೆದಿದ್ದಾರೆ. ಇದು ಹೊಲಗಳಲ್ಲಿ ಹುಳಗಳನ್ನು ನಾಶ ಮಾಡುತ್ತದೆ. ಕೆಲವು ಶಾಸ್ತ್ರಜ್ಞರು ಕುಷ್ಠರೋಗವು ಹಾವು ಕಡಿದರೆ ಗುಣವಾಗುದೆಂದು ಶೋಧವನ್ನು ತೆಗೆದಿ

ಧ್ದಾರೆ. ಇವೇ ಮೊದಲಾದ ಪ್ರಯೋಗಗಳಿಂದ ಮಾನವಿ ಪ್ರಪಂಚದೊಳಗಿನ ದುಃಖಗಳನ್ನು ಹೋಗಲಾಡಿಸಿ ಸುಖಸಮಾಧಾನಕ್ಕಾಗಿ ಪ್ರಯೋಗಗಳು ನಡೆದಂತೆ ಹೆಣ್ಣು ಮಕ್ಕಳು ಯಾವ ಸ್ಥಿತಿಯಲ್ಲಿದ್ದಾರೆ. ಅವರ ಏಳ್ಗೆಯಾಗಬೇಕಾದರೆ ಏನು ಮಾಡಬೇಕೆಂಬುವದಕ್ಕಾಗಿ ಪ್ರಯೋಗಗಳನ್ನು ಮಾಡುವದು ಅಗತ್ಯವಿದೆ.

೯—೨—೪೮:— ಶಾಸ್ತ್ರೀಯ ಜ್ಞಾನದ ಅಭಾವದ ಮೂಲಕ ಮತ್ತು ಹೆಣ್ಣುಮಕ್ಕಳಿಗೆ ಮಕ್ಕಳನ್ನು ಜೋಪಾನ ಮಾಡುವ ಕೆಲಸವಿರುವದರಿಂದ ಅವರ ನೀತಿಕಲ್ಪನೆಗೆ ಬೆಲೆ ಕೊಟ್ಟು ಅವರನ್ನು ಮನೆ ಕೆಲಸ ಮಾಡಲ್ಕು ಇಟ್ಟಿದ್ದರಿಂದ ಗಂಡಸರಿಗೆ ಎಲ್ಲ ವಿಷಯಗಳಿಗೂ ಪರವಾನಿಗಿನಿಂದ ಯಾವಾಗಲೂ ಹಿಂದುಳಿಯುವ ಪ್ರಸಂಗ ಬಂದಿದೆ. ಗಂಡಸರು ತಮ್ಮ ಮನಸ್ಸಿಗೆ ತೋರಿದಾಗ ಹೆಣ್ಣುಮಕ್ಕಳೊಡನೆ ವ್ಯವಹಾರ ಮಾಡುವದರಿಂದ ಹೆಣ್ಣು-ಮಕ್ಕಳ ದೇಹಸ್ಥಿತಿಯಾದರೂ ಕೆಡಹತ್ತಿದೆ ಹೀಗಾಗಿ ಹೆಣ್ಣುಮಕ್ಕಳಿಗೆ ತಮ್ಮ ಸ್ವತಂತ್ರ ವೃತ್ತಿಯಿಂದ ಜೀವನಸಾಗಿಸಲು ಬಾರದಂತಾಯ್ತು ಇವರಿಂದ ಹೆಣ್ಣುಮಕ್ಕಳಲ್ಲಿ ಎರಡು ವಿಧವಾಯ್ತು. ಲಗ್ನವಾಗಿ ಸಂಸಾರದಲ್ಲಿ ಬೀಳುವದು. ವೇಶ್ಯಾವೃತ್ತಿ ದೇವರು ಕೇವಲ ಗಂಡು-ಹೆಣ್ಣುಗಳನ್ನು ಹುಟ್ಟಿಸಿದರು. ಆದರೆ ಅವನು ಇಂಥಿಂಥವರೇ ಗಂಡ-ಹೆಂಡಿರೆಂದು ಹೇಳಿರಲಿಲ್ಲ ಗೀತೆಯಲ್ಲಿ ಹೇಳಿದಂತೆ ನಾಲ್ಕು ವರ್ಣಗಳನ್ನು ದೇವರು ಮಾಡಿದ್ದಾನೆ. ಅದೇ ಮುಂದೆ ಬೆಳೆಯುತ್ತ ಹೋಗಿ ಬೇರೆ ಬೇರೆ ವರ್ಣಗಳಾಗಿ ಈಗ ಮನೆ ಮನೆಗೆ ನಾಲ್ಕಾರು ಪಂಗಡಗಳಾಗಿವೆ. ಯಾವದೊಂದು ಉಪಯುಕ್ತವಾದ ಬೌದ್ಧಿಕ ಕೆಲಸ ಮಾಡುವರೆಂದು ತೀ. ದಾ. ಇವರಿಗೆ ಯಾವ ದೈಹಿಕ ಕೆಲಸ ಹಚ್ಚುವದಿಲ್ಲ. ಮೊದಲು ನಮಗೇ ಪ್ರಾರ್ಥನೆ ಮುಗಿದ ಬಳಿಕ ಭಾಷಣ ಮಾಡ್ತಿದರೆಂದರೆ, ನಿಮ್ಮಲ್ಲಿ ಯಾರೂ ಮುಂದಕ್ಕೆ ಬಾರದೆ ತಿರುಗಿ ತೀ. ದಾ. ಇವರಿಗೇ ಹಚ್ಚಿದ್ದಿರಿ ಪ್ರತಿಯೊಬ್ಬರಿಗೆ ಓದುವ ಅಭ್ಯಾಸ ಮಾಡಲು ಅನುಕೂಲ ಮಾಡಬೇಕೆಂದರೆ ಅದು ಸಾಧ್ಯವಾಗುವದಿಲ್ಲ. ಆದ್ದರಿಂದ ಹತ್ತು ಜನರಲ್ಲಿ ಯಾರಿಗಾದರೊಬ್ಬರಿಗೆ ಒಂದು ಕೆಲಸದ ಹೊಣೆ ಹೊರಿಸಿ ಆ ಕೆಲಸ ಮಾಡಲು ಅವರಿಗೆ ಅನುಕೂಲವಾಗುವಂತೆ ಬೇರೆಯವರು ಸಹಾಯಕರಾದರೆ ಅವರೊ

ಬ್ಬರು ಮಾಡುವ ಕೆಲಸದಿಂದ ಎಲ್ಲರೂ ಲಾಭ ಪಡೆಯಬಹುದು. ಈ ತೆರ ನಾಗಿ ವಿಚಾರ ಮಾಡಿದರೆ ಯಾವ ಕೆಲಸವು ಯಾರಿಗೆ ಬಾರದ್ದಿಲ್ಲ. ಅನು ಕೂಲ ಸಂಧಿ ಒದಗಿಸಿ ಕೊಟ್ಟಲ್ಲಿ ಯಾರಿಗಾದರೂ ಯಾವ ಕೆಲಸವಾದರೂ ಬರಬಹುದು. ಅದು ಈಗ ಅನುಭವಕ್ಕೆ ಬಂದ ಮಾತಾಗಿದೆ. ಒಂದು ಕಾಲಕ್ಕೆ ಶೂದ್ರರಿಗೆ ವೇದಾಭ್ಯಾಸದ ಅನುಕೂಲವಿರಲಿಲ್ಲ. ಅವರಂತೆ ಪರಕೀಯರಾದ ಮುಸಲ್ಮಾನರಿಗಾಗಲಿ, ಪಾದ್ರಿಗಳಿಗಾಗಲಿ ಇಲ್ಲಿಯವರು ವಿದ್ಯಾಭ್ಯಾಸ ಮಾಡಗೊಡಲಿಲ್ಲ. ಮುಂದೆ ಅವರು ವೇಷಾಂತರ ಮಾಡಿ ಬ್ರಾಹ್ಮಣರಿಗೆ ಅಷ್ಟು ಜ್ಞಾನದ ಅಧಿಕಾರ ಮಾತ್ರ ದೇವರಿಂದ ಸಿಕ್ಕಿಲ್ಲ. ಪ್ರತಿಯೊಬ್ಬರಿಗೂ ಜ್ಞಾನದ ಅಧಿಕಾರ ಉಂಟೆಂದು ಪ್ರತ್ಯಕ್ಷವಾಗಿ ತೋರಿಸಿಕೊಟ್ಟಂತೆ ಸ್ತ್ರೀಯರ ವಿಷಯವಾಗಿಯಾದರೂ ಎಷ್ಟೋ ನಿರ್ಬಂಧ ನೆಗಳು, ತಪ್ಪುತಿಳಿವಳಿಕೆಗಳು ಜನರಲ್ಲಿ ಹರಡಿವೆ. ಅವುಗಳನ್ನು ಹೋಗ ಲಾಡಿಸಲು ಎಷ್ಟೋ ಪ್ರಯೋಗಗಳನ್ನು ಮಾಡಿ ಸ್ತ್ರೀಯರ ನಿಜ ಸ್ವಭಾವದ ಸಲುವಾಗಿ ಕೆಲವು ಸಂಗತಿಗಳನ್ನು ಸಿದ್ಧಪಡಿಸಬೇಕಾಗಿವೆ ಮತ್ತು ಅವರ ಸಲುವಾಗಿ ರೂಢಿಯಲ್ಲಿ ಬಂದ ಅತಿರಂಜಿತ ನೀತಿ ಕಲ್ಪನೆಗಳ ಬಗ್ಗೆ ಗುಟ್ಟು ಹೊರಗೆಡಹುವದು ತೀರ ಅಗತ್ಯವಿದೆ. ಬಹಿರಂಗವಾಗಿ ಅವರಿಗೆ ಜಗ ದ್ವ್ಯವಹಾರದಿಂದ ಸ್ತ್ರೀಯರನ್ನು ದೂರಿಡುವದರಿಂದ ಅವರ ಪಾರತಂತ್ರ್ಯದ ಬಂಧನಗಳು ಹೆಚ್ಚಾಗಿ ಅವರ ನೀತಿಯಾದರೂ ಹೇಳತಕ್ಕಂಥಾದ್ದಿರುವುದಿಲ್ಲ.

೧೦-೩-೪೪:— ಅನುಕೂಲ ಸಂಧಿ ಇಲ್ಲದಿದ್ದರೆ ನಮಗೆ ಜ್ಞಾನ ಕಡಿಮೆಯಾಗುವದು. ಯಾರಿಗೆ ಎಷ್ಟು ಅನುಕೂಲ ಸಿಗುತ್ತದೆಯೋ ಅಷ್ಟು ಜ್ಞಾನ ಹೊಂದಲು ಸಾಧ್ಯ ಆದ್ದರಿಂದ ಹೆಣ್ಣುಮಕ್ಕಳಿಗೆ ಜ್ಞಾನವು ಹೆಚ್ಚು ಸಿಗದಾಗಿದೆ. ಅವರಿಗೆ ಸ್ವತಂತ್ರ ವಿಚಾರ, ಪ್ರಯೋಗ ಇವುಗಳನ್ನು ಮಾಡಲು ಬಾರದಾಗಿದೆ. ಆದರೂ ಸಹ ಕೆಲವು ವೇಳೆ ಗಂಡಸರೊಂದಿಗೆ ಕೂಡಿ ನಡೆಯುವ ಕೆಲಸವು ಹೆಂಗಸರಿಗೆ ಬರುವದರಿಂದ ಸ್ವಲ್ಪ ಜ್ಞಾನವಾದರೂ ಸ್ತ್ರೀಯರಿಗೆ ಬರಲು ಸಹಾಯವಾಗುತ್ತದೆ ಈ ಮನುಷ್ಯ ನಿರ್ಮಿತ ಸದೋಷ ಕೃತ್ರಿಮ ಜೀವನದಲ್ಲಿ ಯಾವದೇ ವಿಷಯವನ್ನು ಎಷ್ಟು ಗುಪ್ತವಾಗಿಡಬೇ ಕೆಂದರೂ ಅದು ಯಾವಹೇ ರೀತಿಯಲ್ಲಿ ಹೊರಬೀಳುವದು. ಕೆಲವು ವೇಳೆ

ಕಾರ್ಯವು ಮೀರಿದ ಮೇಲೆ ಅದು ಹೊರಬೀಳುವದು. ಇದರಿಂದ ಕೆಲವು ವೇಳೆ ಘಾತವಾಗುವ ಪ್ರಸಂಗ ಉಂಟು. ಮೊದಲು ಹೊರಬಿದ್ದಿದ್ದರೆ ಮಹಾತ್ಮರ ಕೊಲೆಯೇ ಆಗುತ್ತಿರಲಿಲ್ಲ. ಮೊದಲು ಈ ಆರ್. ಎಸ್. ಎಸ್. ಸಂಘವನ್ನು ಎಷ್ಟೋ ಜನರು ಹೊಗಳುತ್ತಿದ್ದು ಅದಕ್ಕೆ ಮನ್ನಣೆ ಕೊಟ್ಟಿದ್ದರು. ಸರದಾರ ವಲ್ಲಭಭಾಯಿ ಪಟೇಲರಾದರೂ ಒಮ್ಮೆ ಇದನ್ನು ಹೊಗಳಿದ್ದರು. ಮೊನ್ನೆ ಬಿಹಾರದಲ್ಲಾದ ಮುಸ್ಲಿಂ ದಂಗೆಯಲ್ಲಿ ಮುಸ್ಲಿಂಮರನ್ನು ಹತ್ತಿಕ್ಕಿದವರು ಈ ಸಂಘದವರೇ. ಆದರೆ ಈಗ ಮಹಾತ್ಮರನ್ನು ಕೊಂದೊಡನೆ ಇಡೀ ಆ ಸಂಘದ ಮೇಲೆ ಎಲ್ಲರಿಗೂ ತಿರಸ್ಕಾರ ಉಂಟಾಯಿತು. ಎಷ್ಟೋ ಪ್ರಮುಖರು (ಮೊದಲು ಅದಕ್ಕೆ ಬೆಂಬಲಕೊಟ್ಟವರು) ಈಗ ಹಿಂಜರಿಯಹತ್ತಿದ್ದಾರೆ. ಆದರೆ ಅವರುಗಳಲ್ಲಿ ಒಬ್ಬನು ಕೊಲೆಗಡಕನಾದರೂ ಅವನಿಗೆ ಹಿಂದೆ ಬೆಂಬಲಿಗರಿರಲೇಬೇಕೆಂದು ಎಲ್ಲರ ನಂಬಿಕೆ. ಈ ಸಂಘದಲ್ಲಿ ಎಷ್ಟೋ ನಿರಪರಾಧಿಗಳಿರಬಹುದು. ಆದರೆ ಆ ಸಂಘಕ್ಕೆ ಸೇರಿದವರೆಂದ ಮೇಲೆ ಎಲ್ಲರೂ ಅಪರಾಧಿಗಳೇ ಎಂದು ಎಲ್ಲರನ್ನು ದಂಡಿಸಹತ್ತಿದ್ದಾರೆ. ಈ ಕೊಲೆಗಡಕತನದ ಭಯಂಕರ ಕೆಲಸ ಮಾಡಬೇಕಾದರೆ ಅದು ಕೇವಲ ಒಬ್ಬನಿಂದ ಸಾಧ್ಯವಿಲ್ಲ. ಆ ಸಂಘದಲ್ಲಿ ಹೀಗೆ ಮಾಡತಕ್ಕದೆಂದು ಮೊದಲೇ ಠರಾಯಿಸಿಕೊಂಡರೆಂದು ಮತ್ತು ಇದರ ಇನ್ನೂ ಎಷ್ಟೋ ಗುಟ್ಟುಗಳು ಈಗ ಹೊರಬೀಳಹತ್ತಿವೆ. ಯಾವದೇ ಸಂಘದ ಅನುಯಾಯಿಗಳ ಯೋಗ್ಯಾಯೋಗ್ಯ ಕೃತ್ಯಗಳಂತೆ ಚಾಲಕರಿಗೆ ಶ್ರೇಯಸ್ಸು ಅಥವಾ ಕಲಂಕ ಹತ್ತುವಂತೆ ಮಹಾತ್ಮರ ಕೊಲೆಯಾಗಲು ಮಹಾತ್ಮರ ಅನುಯಾಯಿಗಳು ಮಾಡಿದ ತಪ್ಪುಗಳೆಲ್ಲ ಮಹಾತ್ಮರ ಪ್ರೇರಣೆಯೇ ಕಾರಣವೆಂದು ಹೇಳಲಾಗಿದೆ.

ಈಗ ಸಮಾಜದಲ್ಲಿ ಯಾರೇ ತಪ್ಪು ಮಾಡಿದರೆ ತೀ. ದಾ. ಇವರ ಮೇಲೆ ಬರುತ್ತದೆ. ಮಾ. ಮಾ. ಇವರೇ ಆಗಲಿ, ಅಥವಾ ತೀ. ದಾ. ಇವರಿಗೆ ವಿಶ್ವಾಸಿಕರು ಯಾರೇ ಆಗಲಿ ತಪ್ಪು ಮಾಡಿದಲ್ಲಿ ಬಾಕಿ ಜನರು ತಿಳಿಯುವದೇನೆಂದರೆ ಇವರು ತಪ್ಪುಮಾಡಬೇಕಾದರೆ ತೀ. ದಾ. ಇವರ ಬೆಂಬಲವಿಲ್ಲದೆ ಆಗುವದಿಲ್ಲ; ಆದ್ದರಿಂದ ಈ ತಪ್ಪಿಗೆ ಅವರೇ ಮೂಲವೆಂದು ಅವರನ್ನು ಬಯ್ಯಹತ್ತುತ್ತಾರೆ. ಇದರಂತೆ ಎಲ್ಲೇ ಆದರೂ ಸಹ ಕೆಳಗಿನವರು ತಪ್ಪು

ಮಾಡಿದೊಡನೆ ಮೇಲಿನವರಿಗೆ ಅಥವಾ ಚಾಲಕರಿಗೆ ಅಪವಾದ ಬರುವದು ಸಹಜ. ಸಾಮಾನ್ಯ ಜನರು ತಪ್ಪಿನ ಮೂಲವನ್ನು ಹುಡುಕಿ ತೆಗೆಯಲು ಪ್ರಯತ್ನಿಸದೆ ಮೇಲಿನ ತೋರಿಕೆಗೆ ಸುಲಭವಾದ ಯಾವ ಕಾರಣವು ಕಾಣು ವದೋ ಅದರಂತೆ ನಡೆಯುತ್ತಾರೆ. ಇದೇ ಪ್ರಕಾರವಾಗಿಯೇ ಯಾರೇ ತಪ್ಪುಮಾಡಲೀ ಅಥವಾ ವಿಚಾರ ಮಾಡಿ ಮಾತಾಡಲೀ ಅದು ತಮ್ಮ ಮನ ಸ್ಸಿಗೆ ಸರಿಬಾರದಿದ್ದರೆ ಅದಕ್ಕೆ ದೊಡ್ಡವರೇ ಹೊಣೆಗಾರರೆಂದು ಅವರನ್ನು ದ್ವೇಷ ಮಾಡುತ್ತಾರೆ. ಹೀಗಾಗಿಯೇ ಈಗ ಮಹಾತ್ಮರ ಕೊಲೆಯಾದದ್ದು.

೧೧-೩-೪೮ :— ಕೆಳಗಿನವರು ಮಾಡಿದ ದೋಷಗಳ ಪರಿಣಾಮವು ಮೇಲಿನವರಿಗೆ ಹೇಗೆ ಬಡಿಯುತ್ತದೆ. ಅದರಂತೆ ಕೆಳಗಿನವರು ಮಾಡಿದ ಒಳ್ಳೆಯ ಕೆಲಸದ ಯಶಸ್ಸಾದರೂ ಮೇಲಿನವರಿಗೆ ಬಂದೇ ಬರುತ್ತದೆ. ಅದರಂತೆ ಹೆಣ್ಣುಮಕ್ಕಳಿಗೆ ಜ್ಞಾನದ ಅನುಕೂಲತೆ ಇಲ್ಲದ್ದರಿಂದ ಅವರು ಮಾಡಿದ ತಪ್ಪು ಕೆಲಸಗಳ ಫಲವು ಅಜ್ಞಾನ, ಜ್ಞಾನ ಇವೆರಡೂ ರೀತಿ ಯಿಂದ ಗಂಡಸರಿಗೆ ಭೋಗಿಸಬೇಕಾಗುತ್ತದೆ. ಇದರಿಂದ ಈಗೀಗ ಕೆಲವು ಮಂದಿ ಗಂಡಸರು ಎಚ್ಚರಾಗಿ ಜಗತ್ತಿನಲ್ಲಿ ನಡೆಯುವ ಎಷ್ಟೋ ಕೆಲಸಗಳಲ್ಲಿ ತಡೆ ಬರಲು ಹೆಣ್ಣುಮಕ್ಕಳ ಅಜ್ಞಾನವೇ ಕಾರಣವೆಂದು ತಿಳಿದು ಅದರ ಪರಿಹಾರಕ್ಕಾಗಿ ಕೇವಲ ಸ್ವಲ್ಪ ಪ್ರಮಾಣದಲ್ಲಿ ಪ್ರಯತ್ನಿಸುತ್ತಿದ್ದಾರೆ. ಕೆಲವೊಂದು ಕಾಲದ ಹಿಂದೆ ಈಗಿನ ಹೆಣ್ಣುಮಕ್ಕಳ ಪರಿಸ್ಥಿತಿಯಲ್ಲೇಕೆ ಅದಕ್ಕಿಂತಲೂ ಕೀಳುಪರಿಸ್ಥಿತಿಯಲ್ಲಿ ಕೆಳಗಿನ ವರ್ಗದವರೆಲ್ಲರನ್ನೂ ಇಟ್ಟಿ ದ್ದರು. ಆ ಕಾಲದಲ್ಲಿ ಮೇಲಿನ ವರ್ಗದವರಿಗಷ್ಟೇ ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗಷ್ಟೇ ವಿದ್ಯೆ ಕಲಿಯುವದಕ್ಕಿತ್ತು. ಕ್ಷತ್ರಿಯರು ದೇಶ ಸಂರಕ್ಷಣೆಯ ಸಲುವಾಗಿಯೂ ಬ್ರಾಹ್ಮಣರು ಜನರಿಗೆ ಉಪದೇಶ ಮಾಡಿ ಹವನ, ಯಜ್ಞ, ಯಾಗಾದಿ ಕರ್ಮಗಳನ್ನು ಮಾಡಿ ದೇಶಕ್ಕೆ ಸುರಕ್ಷಿತವಾಗು ವಂತೆ ಮಾಡಲು ವೈಶ್ಯರು ರಾಷ್ಟ್ರದ ಆರ್ಥಿಕ ಅಭ್ಯುದಯಕ್ಕಾಗಿ ವಿದ್ಯೆ ಕಲಿಯುತ್ತಿದ್ದರು. ಬಾಕಿ ಉಳಿದ ಶೂದ್ರ ವರ್ಗದವರು ಹೊಟ್ಟೆ ಬಟ್ಟೆಗಳ ಹೊಣೆಯನ್ನು ಹೊರುತ್ತಿದ್ದರು. ಇಡೀ ಜನರ ೩ ದಷ್ಟು ಜನರು ಶೂದ್ರರೂ, ೧/೪ ದಷ್ಟು ವೈಶ್ಯರೂ, ಉಳಿದ ೪ ದಲ್ಲಿ ಹೆಚ್ಚಿಗೆ ಕ್ಷತ್ರಿಯರೂ, ತೀರ ಕಡಿಮೆ

ಬ್ರಾಹ್ಮಣರೂ ಇದ್ದರು. ಬುದ್ಧಿಶಕ್ತಿಯನ್ನು ಬೆಳೆಸಲು ಎಲ್ಲರೂ ಎಲ್ಲ ತೆರನಾಗಿ ಅನುಕೂಲಮಾಡಿ ಕೊಡುತ್ತಿರುವದರಿಂದ ಅವರ ಬುದ್ಧಿಶಕ್ತಿ ಹೆಚ್ಚಿಚ್ಚಾಯ್ತು. ಒಂದೇ ಒಂದು ಪಕ್ವವಾದ ಜೋಳದ ತೆನೆಯಲ್ಲಿನ ಕಾಳನ್ನು ಬಿತ್ತಿದರೆ ಅದು ಸಾಕಾಷ್ಟು ಜೋಳವನ್ನು ಪೂರೈಸಿ ಕೊಡುವಂತೆ, ಮಾಡುವ ದೇಶಭಕ್ತಿ ಯಂತೆ ಬುದ್ಧಿಶಕ್ತಿಯು ಎಲ್ಲಾ ಶಕ್ತಿ ಅಲ್ಲ. ಅಲ್ಪ ಸಂಖ್ಯಾಕರಾದ ಬ್ರಾಹ್ಮಣ ರಿಂದ ದೇಶದಲ್ಲಿಯ ಎಲ್ಲ ಜನರಿಗೂ ಬೌದ್ಧಿಕ ಲಾಭವಾಗುತ್ತಿತ್ತು. ಇದರಿಂದ ಅವರ ಬುದ್ಧಿಶಕ್ತಿಯ ಉಪಯೋಗವನ್ನು ಎಲ್ಲರೂ ಒಳ್ಳೆಯ ರೀತಿಯಲ್ಲಿ ತೆಗೆದುಕೊಳ್ಳುತ್ತಿದ್ದರು. ಬುದ್ಧಿಶಕ್ತಿಯೇ ಎಲ್ಲವನ್ನೂ ಅಲ್ಲೋಲಕಲ್ಲೋಲ ಮಾಡುವ ಅದ್ಭುತ ಶಕ್ತಿಯಾದ್ದರಿಂದ ಪರಮಾರ್ಥಕ್ಕಾಗಿ ಅದರ ಉಪಯೋಗ ವಾಗುದ ವರೆಗೆ ಒಳ್ಳೇ ಕೆಲಸ ಮಾಡುತ್ತಿತ್ತು. ಮುಂದೆ ಉತ್ಪತ್ತಿ, ಸ್ಥಿತಿ ಲಯ ತತ್ವಕ್ಕನುಗುಣವಾಗಿ ಅದರ ಉಪಯೋಗವು ಸ್ವಾರ್ಥಕ್ಕಾಗಿ ಹತ್ತಿದ ಕೂಡಲೇ ಅದರ ದುಷ್ಪರಿಣಾಮಗಳಿಗೆ ಪ್ರಾರಂಭವಾಯಿತು.

೧೨—೨—೪೪:— ಈ ಬುದ್ಧಿ ಇದ್ದ ವರ್ಗದವರು ಕಡಿಮೆ ಇದ್ದುದ ರಿಂದ ಮೊದಲು ಜಗತ್ತಿಗೆ ಇವರೇ ಮಾರ್ಗದರ್ಶಕರಾಗಿದ್ದರು. ಆದರೆ ಜಗತ್ತಿನ ಕಲ್ಯಾಣವು ಕೇವಲ ಬುದ್ಧಿವರ್ಗದವರೊಬ್ಬರಿಂದಲೇ ಸಂಪೂರ್ಣ ವಾಗಲು ಎಂದಿಗೂ ಸಾಧ್ಯವಿಲ್ಲ. ಬುದ್ಧಿ ಬೆಳೆಸಿದವರು ಬೆಳೆಸದಿದ್ದವರು ಇಬ್ಬರೂ ಹೆಗಲಿಗೆ ಹೆಗಲುಕೊಟ್ಟು ಕೆಲಸ ಸಾಗಿಸಿಕೊಂಡು ಹೋಗುವದ ರಿಂದಲೇ ಜಗತ್ತಿನ ಕಲ್ಯಾಣ. ಮೊದಲಿನ ಜನರು ಇದೇ ರೀತಿ ನಡೆಯುತ್ತಿ ದ್ದರು. ನಮ್ಮ ತಲೆಯಲ್ಲಿ ಎರಡು ತೆರನಾಗಿ ಕೆಲಸ ಮಾಡುವ ಮಿದುಳಿನ ಭಾಗಗಳಿದ್ದರೂ ಅದರಲ್ಲಿ ಶ್ರೇಷ್ಠವಾದುದು ಕನಿಷ್ಠವಾದುದೆಂದು ಹೇಳಲು ಬರುವುದಿಲ್ಲ. ಎರಡರ ಉಪಯೋಗ ಸಾಕಷ್ಟವೆ. ಒಂದೇ ಮಿದುಳಿದ್ದರೆ ಏನಾಗುತ್ತಿತ್ತೆನ್ನುವದು ಸಾಧಾರಣವಾಗಿ ನಾಲ್ಕಾರು ಇಯತ್ತೆ ಕಲಿತ ವಿದ್ಯಾರ್ಥಿನಿಯರಿಗೆ ತಿಳಿದ ವಿಷಯವೆ, ಅದರಂತೆಯೇ ಜನರಲ್ಲಿಯಾದರೂ ಸಹ ಸ್ಥೂಲಮಾನದಿಂದ ಎರಡೂ ವರ್ಗಗಳಿರುವವು. ಅವುಗಳಲ್ಲಿಯಾರೊ ಬ್ಬರ ಕೊರತೆಯಾದರೂ ಸಹ ಜಗತ್ತಿಗೆ ಅಕಲ್ಯಾಣವೇ ಸರಿ. ವಿದ್ಯೆ ಕಲಿತ ರೇನೇ ಬುದ್ಧಿ ಬೆಳೆಯುವದೆನ್ನುವದು ಸುಳ್ಳು. ವಿದ್ಯೆಯಿಂದ ತೀಕ್ಷ್ಣವಾಗು

ವದು. ಅದು ಹೆಚ್ಚು ಆದರೆ ಸಾಮಾನ್ಯ ಬುದ್ಧಿ ಎಲ್ಲರಿಗೂ ಇದೆ. ಅದು ಸ್ವಾಭಾವಿಕ ಧರ್ಮ "ಆಹಾರ-ನಿದ್ರಾ ಭಯ ಮೈಥುನಾನಿ ಸಾಮಾನ್ಯ ಮೇ-ತತ್ಪಶು ಭಿರ್. ನರಾಣಾಂ" ಎಂದು ಈ ವಿಷಯಗಳಿಗಾಗಿ ಎಲ್ಲ ಪ್ರಾಣಿಗಳಿಗೂ ಬುದ್ಧಿ ಇದ್ದೇ ಇದೆ. ಆದರೆ ಹೆಚ್ಚಿನ ಶೋಧ ಮಾಡುವದು, ಗಣಿತ ಮಾಡುವದು. ಇವೇ ವಿಷಯಗಳ ಜ್ಞಾನವು ಮುಂತಾದ ಹೆಚ್ಚಿನ ವಿದ್ಯೆಯಿಂದ ಬರತಕ್ಕದ್ದು ಅದು ಎಲ್ಲರಿಗೂ ಸಾಧ್ಯವಿಲ್ಲ. ಆಹಾರ ನಿದ್ರಾದಿ ಜ್ಞಾನಗಳಲ್ಲಿ ಸಹ ಕಂಡು ಬರುತ್ತದೆ. ಅವುಗಳಲ್ಲಿ ಸಹ ಕೆಲವು ಪಶುಗಳು ಸೂಕ್ಷ್ಮ ಬುದ್ಧಿಯವೂ ಕೆಲವು ಮಂದ ಬುದ್ಧಿಯವೂ ಇರುತ್ತವೆ. ಆದರೆ ಅವು ನಮ್ಮಂತೆ ವಿದ್ಯೆಯನ್ನೇನೂ ಕಲಿತಿರುವದಿಲ್ಲ. ಹೆಣ್ಣು ಮಕ್ಕಳಿಗೆ ಗ್ರಂಥವನ್ನೋದಿ ಹೆಚ್ಚಿನ ಜ್ಞಾನ ಬೆಳೆಸುವದೆಂದರೆ ಸ್ವಲ್ಪ ಕಷ್ಟವೇ ಸರಿ. ಅವರಿಗೆ ಅನುಕೂಲ ಪರಿಸ್ಥಿತಿ ಇಲ್ಲ. ಇನ್ನೂ ವರೆಗೆ ಅವರ ಸಲುವಾಗಿ ಪ್ರತ್ಯೇಕ ಒಂದು ಲಾಯಬ್ರರಿ ಇಲ್ಲ. ಮನೆಮಾರು ಬಿಟ್ಟು ಅಭ್ಯಾಸದ ಬೆನ್ನು ಹತ್ತುವದೆಂದರೂ ಅದು ಒಂದು ತಪಶ್ಚರ್ಯವೇ ಆಗಿದೆ. ತಪಶ್ಚರ್ಯದ ಅರ್ಥ ತಿಳಿಯದೆ ಯಾರು ಒಂದು ಗುಡ್ಡದಲ್ಲಿ ಮೂಗು ಹಿಡಿದು ಹಗಲೂ ರಾತ್ರಿ ಕುಳಿತು ದೇವರಧ್ಯಾನ ಮಾಡುವರೋ ಅವರಿಗೇ ತಪಸ್ವಿಗಳೆಂದೂ, ಅವರು ಮಾಡುವದೇ ತಪಸ್ಸೆಂದೂ ಅನ್ನುತ್ತೇವೆ. ಇದು ನಮ್ಮ ಮೂಢ ಕಲ್ಪನೆ. ಯಾವದೊಂದು ವಿಷಯದ ನಿರ್ಮಾಣ ಮಾಡಬೇಕಾದರೆ ಆ ಆ ಕ್ಷೇತ್ರದ ಪರಿಸ್ಥಿತಿಗನುಸರಿಸಿ ತುಲನೆ ಮಾಡಬೇಕಾಗುತ್ತದೆ ಪರಿಸ್ಥಿತಿ ಪ್ರತಿಕೂಲವಿದ್ದಾಗ್ಯೂ ಸಹ ಒಳ್ಳೇ ಗುರಿ ಇಟ್ಟು ಹೊರಟು ಅದರಲ್ಲಿ ಯಶಸ್ಸು ಪಡೆಯುವದೂ ಒಂದು ದೊಡ್ಡ ತಪಸ್ಸಿದೆ. ಹೆಣ್ಣು ಮಕ್ಕಳು ಈ ವಿಷಯದಲ್ಲಿ ಇನ್ನೂ ಬಹಳ ಅಜ್ಞಾನಿಗಳಾಗಿ ಉಳಿದಿದ್ದಾರೆ. ಅವರಿಗೆ ಡೌಲು, ವೈಯ್ಯಾರ ಮಾಡುವದೆಂದರೆ ಖುಮೇದಿನ ಕೆಲಸದ್ದಾಗಿದೆ. ಇದರಲ್ಲಾದರೂ ಅವರ ತಪ್ಪಿಲ್ಲ. ಇದಕ್ಕೆ ಅವರ ಅಜ್ಞಾನವೇ ಕಾರಣ. ಯಾರೇ ತಿನ್ನಲಿಕ್ಕೆ ಕೊಟ್ಟರೆ ವಶವಾಗದ ಮನುಷ್ಯನಿಲ್ಲ. ಅದರಲ್ಲೂ ಈ ಹೆಣ್ಣು ಮಕ್ಕಳು ಅದರಲ್ಲಿ ಎತ್ತಿದ ಕೈಯ್ಯಾಗಿದ್ದಾರೆ. ಇದನ್ನು ಹೋಗಲಾಡಿಸಲು ಅವರುಗಳ ಪೈಕಿಯೇ ಒಬ್ಬರು ಮುಂದೆ ಬಂದು ಪರಿಸ್ಥಿತಿಯ ವಿರುದ್ಧ ಹೆಣಗಾಡಲು ಪ್ರಯತ್ನಿಸಬೇಕು. ಗಂಡು ಹೆಣ್ಣುಗಳ ಕೆಲವೊಂದು ಜ್ಞಾನವನ್ನು

ಕೂಡಿಯೇ ಗಳಿಸಬೇಕಾಗುತ್ತದೆ ಎನ್ನುವದನ್ನು ಅವರಿಗೆ ತಿಳಿಸಿಕೊಡಬೇಕು. ಸೃಷ್ಟಿಯಲ್ಲಿ ದೇವರು ಎಲ್ಲರಿಗೂ ಸರಾಸರಿ ಸಂಪತ್ತು ಇರಲು ವ್ಯವಸ್ಥೆ ಮಾಡಿದ್ದಾನೆ. ಆದರೆ ಬುದ್ಧಿ ಇದ್ದವರು ಬುದ್ಧಿ ಇಲ್ಲದವರ ತಾಕಲಾಟದಲ್ಲಿ ಯುಕ್ತಿಕುಯುಕ್ತಿಗಳ ನಡುವೆ ಸಿಕ್ಕು ಈ ಸಂಪತ್ತೆಲ್ಲವು ಚಲ್ಲಾಪಿಲ್ಲಿಯಾಗಿ ಹರಿದುಹಂಚಿ ಹೋಗಿ ಕೆಲವರು ಡೊಳ್ಳುಹೊಟ್ಟೆಯ ಶ್ರೀಮಂತರಾದರೆ ಕೆಲವರು ಕೂಳಿಲ್ಲದೆ ಅಳುವ ಪ್ರಸಂಗ ಬಂದಿದೆ. ಇಂಗ್ಲೀಷಿನಲ್ಲಿ ಹೇಳುವದೆಂದರೆ ( With out Euplition none con be riv ) ವಿದ್ಯೆಯಿಂದ ಬುದ್ಧಿ ಪ್ರಭಾವ ಇದರಿಂದ ಅಜ್ಞಾನಿ ಜನರ ಸುಲಿಗೆ ಮೋಸ. ಈ ಪ್ರಪಂಚದ ತೊಡಕಿನಲ್ಲಿ ಬುದ್ಧಿಜೀವಿಯೇ ಬದುಕಬಲ್ಲ. ಬುದ್ಧಿಯ ಬೆಳವಣಿಗೆ ಇಲ್ಲದವರು ಕ್ಷಣಕ್ಷಣಕ್ಕೂ ಮೋಸಹೋಗಿ ದುಃಖಕ್ಕೆ ಈಡಾಗುತ್ತಿರುವರು. ಬುದ್ಧಿಜೀವಿಗಳ ಪ್ರಮಾಣವು ಹೆಚ್ಚಾದಂತೆ ಆಯುಷ್ಯವು ಹೆಚ್ಚಿನ ತೊಡಕಿನದಾಗುವದು. ಬುದ್ಧಿಶಕ್ತಿಯು ಉತ್ಪಾದಕ ಶಕ್ತಿಯುಳ್ಳದ್ದು. ಈಗ ನಮ್ಮಲ್ಲೇ ಒಂದು ಸಣ್ಣ ಕ್ಷೇತ್ರದಲ್ಲೇ ನೋಡಿದರೆ ನಾವು ಒಂದು ಗುಡಿಸಲನ್ನು ಹಾಕಿಕೊಂಡಿದ್ದೇವೆ. ( ಈ ನಮ್ಮ ಮನೆಗೆ ಗುಡಿಸಿಲೆಂದೇ ಎನ್ನೋಣ ) ನಮ್ಮ ಆಳುಮಗನಾದರೂ ಒಂದು ಗುಡಿಸಲನ್ನು ಹಾಕಿಕೊಂಡಿದ್ದಾನೆ. ಆದರೆ ಇವೆರಡರ ಭೇದವನ್ನು ನೋಡಹೋದರೆ ಅಜಗಜಾಂತರವಿದೆ. ಆದೇ ಆ ಆಳಿನ ಗುಡಿಸಲಿಗೂ ಮತ್ತು ನಮ್ಮ ಗುಡಿಸಲಿನ ಹೊರಭಾಗದಲ್ಲಿರುವ ಮತ್ತು ಒಂದು ಮುದುಕಿಯ ಗುಡಸಲಿಗೂ ಹೋಲಿಸಿದರೆ ಆ ಎರಡರಲ್ಲೂ ಸಹ ಹೇಳಲು ಬಾರದಷ್ಟು ಅಂತರವಿದೆ. ಅಂತೂ ಒಟ್ಟಾರೆ ಹೇಳುವದೇನೆಂದರೆ ಈ ದುಡ್ಡಿನಿಂದಲೇ ಅಸಮಾನತೆಯು ನಿರ್ಮಿತವಾಗಿದೆ.

೧೩—೨—೬೮:— ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಈ ಪ್ರಕಾರ ಭಾಗಗಳಾಗಿ ಆದರಲ್ಲಿ ಶೂದ್ರ ಸಂಖ್ಯೆ ಹೆಚ್ಚಾಗಿಯೂ ಬ್ರಾಹ್ಮಣ ಸಂಖ್ಯೆ ತೀರ ಕಡಿಮೆಯೂ ಆಯಿತು. ಅವರು ಬುದ್ಧಿಶಕ್ತಿ ಉಪಯೋಗಿಸಿ ಕೆಲಸ ಮಾಡುವವರಾದ್ದರಿಂದ ಅವರಿಗೆ ಸಾಧನ ಸಲಕರಣೆಗಳು ಬೇಕಾಗಹತ್ತಿದವು. ಈ ಬುದ್ಧಿನಿರ್ಮಿತ ಕೃತ್ರಿಮ ಪ್ರಪಂಚದಲ್ಲಿ ಮಾರ್ಗದರ್ಶಕರಾಗಿರುವದರಿಂದ, ಅವರಿಗೆ ಮರ್ಯಾದೆ ಕೊಟ್ಟು ಅವರ ಪೋಷಣೆಯ

ಭಾರವನ್ನೂ ಹೊರಬೇಕಾಯಿತು. ಒಂದು ವೇಳೆ ಅವರು ತಪ್ಪು ಮಾಡಿದಲ್ಲಿ ಅವರು ವಿಚಾರಮಾಡಿ ಮಾಡುವರೆಂಬ ಉದ್ದೇಶದಿಂದ ಅವರಿಗೆ ಶಿಕ್ಷೆ ಇಲ್ಲದಂತಾಯಿತು. ಶೂದ್ರರಿಗೆ ತಪಶ್ಚರ್ಯ ಮಾಡಲು ಹಕ್ಕಿರಲಿಲ್ಲ ಶೂದ್ರನೆಂಬುವನು ತಪಸ್ಸಿಗೆ ಕುಳಿತಾಗ ರಾಮನು ಅವನನ್ನು ಕೊಂದನು. ಈ ರೀತಿ ವ್ಯತ್ಯಾಸವಿತ್ತೇ ಹೊರತು ಊಟ ಉಡಿಗೆಗಳಲ್ಲಿ ವ್ಯತ್ಯಾಸವಿರಲಿಲ್ಲ. ಆ ಕಾಲದಲ್ಲಿ ಬ್ರಾಹ್ಮಣರು ಮಾಂಸ ತಿನ್ನುತ್ತಿದ್ದರು. ಮುಂದೆ ಬ್ರಾಹ್ಮಣರ ಬೆಲೆಗಿಂತ ರಾಜರಿಗೆ ಮರ್ಯಾದೆ ಬರಹತ್ತಿತು. ಅದರಂತೆ ಶ್ರೀಮಂತರಿದ್ದವರಿಗೂ ಮರ್ಯಾದೆ ಬರಹತ್ತಿತು ಆದರೆ ಕ್ಷತ್ರಿಯರು ಮಾತ್ರ ಬ್ರಾಹ್ಮಣರಿಗೆ ಮರ್ಯಾದೆ ಕೊಡಬೇಕಾಗುತ್ತಿತ್ತು. ಅವರಿಗೆ ವಿದ್ಯೆ ಶಕ್ತಿ ಇದ್ದರೂ ವಿಚಾರ ತತ್ವಗಳಿಗೆಲ್ಲ ಬ್ರಾಹ್ಮಣರ ಮೇಲೆ ಅವಲಂಬಿಸಬೇಕಾಗುತ್ತಿತ್ತು. ಇದರಿಂದ ಬ್ರಾಹ್ಮಣರಿಗೆ ಮರ್ಯಾದೆ ಸಿಕ್ಕಿತು, ವೈಶ್ಯರಿಗೆ ಬುದ್ಧಿ, ಶಕ್ತಿ ಎರಡೂ ಇಲ್ಲದೆ ಕೇವಲ ಶ್ರೀಮಂತಿಕೆ ಇದ್ದುದರಿಂದ ಅವರು ಈ ಎರಡೂ ಪಂಗಡದವರಿಗಿಂತ ಕಡಿಮೆಯವರೆನಿಸಿಕೊಂಡರು. ಮುಂದೆ ಬ್ರಾಹ್ಮಣರು ತಮ್ಮ ಬುದ್ಧಿಶಕ್ತಿಯ ದುರುಪಯೋಗ ಮಾಡಹತ್ತಿದುದರಿಂದ ಅವರ ಬೆಲೆಯು ದಿನದಿನಕ್ಕೆ ಕಡಿಮೆಯಾಗಹತ್ತಿತು. ಮೊದಮೊದಲು ಬ್ರಾಹ್ಮಣರ ಬೆಲೆ ಹೆಚ್ಚಾಗಿದ್ದು ಅವರ ಸಂಸ್ಕೃತಿ ಉಚ್ಛತರಗತಿಯದಿದ್ದುದರಿಂದ ಅವರ ಸಂಪರ್ಕದಿಂದ ಕೆಡಕಾಗಲಾರದೆಂಬ ಭಾವನೆಯಿಂದ ಬ್ರಾಹ್ಮಣ ಗಂಡಸು ಬೇಕಾದ ವರ್ಣದ ಹೆಂಗಸರನ್ನು ಲಗ್ನವಾಗಲಡ್ಡಿಯಿಲ್ಲ ಕೆಳಗಿನ ವರ್ಣದ ಗಂಡಸು ಮೇಲುವರ್ಗದ ಹೆಂಗಸನ್ನು ಮದುವೆಯಾಗಕೂಡದು. ಹೀಗೆ ಆದಲ್ಲಿ ಶಿಕ್ಷೆ. ಈ ಪರಿಸ್ಥಿತಿಯು ಪ್ರಾರಂಭವಾಗಿ ಮುಂದೆ ಪಾವಿತ್ರ್ಯ ಹಾಗೂ ಉಚ್ಚಸಂಸ್ಕಾರಗಳನ್ನುಳಿಸುವ ನೆವದಿಂದ ಜಾತಿಜಾತಿಗಳಲ್ಲಿಯೇ ಲಗ್ನವಾಗಬೇಕೆಂಬ ಕಾಯದೆ ಹಾಗೂ ರೂಢಿಯು ಪ್ರಚಾರದಲ್ಲಿ ಬಂದಿತು. ಇದರಿಂದ ಸಂಸ್ಕಾರಗಳು ಅದಲು ಬದಲಾಗಿ ಎಲ್ಲರಲ್ಲಿಯ ಸಹಕಾರ ಅಳಿದು ಹೋಗಿ ದ್ವೇಷ, ಅಸೂಯೆಗಳಿಗೆ ಪ್ರಾರಂಭವಾಗಿ ಇಡೀ ಜನಾಂಗವೇ ಹಾಳಾಗಿದೆ. ವ್ಯವಹಾರದ ಸಲುವಾಗಿಯಾದರೂ ಎಲ್ಲ ಜಾತಿಯ ಗಂಡಸರೂ ಸಹಕಾರ ಮಾಡುತ್ತ ಇದ್ದಾರೆ. ಆ ಮಾರ್ಗವು ಹೆಂಗಸರಿಗೆ ಇಲ್ಲದ್ದರಿಂದ ಅವ

ರಲ್ಲಿ ಒಕ್ಕಟ್ಟಿಲ್ಲದಂತಾಗಿ ಅವರ ಸುಖದುಃಖಗಳ ನ್ಯಾಯಾ ನ್ಯಾಯಗಳ ವಿಚಾರವಾಗದೆ ಅವರ ಸ್ಥಿತಿಯು ಬಹಳ ಶೋಚನೀಯವಾಗಿದೆ.

A Pany wise Pound Foolish ಎಂದು ಗಾದೆ ಇದೆ. ಒಂದು ಪೈ ಉಳಿಸಿಕೊಳ್ಳಲು ರುಪಾಯಿ ಹಾಳು ಮಾಡುವದು. ಇದನ್ನು ನೋಡಿದರೆ ಜನರು ತಮ್ಮ ಲಾಭಮಾಡಿಕೊಳ್ಳಲು ತಮಗೆ ಬಾರದವರಾಗಿದ್ದಾರೆ. ಇದಕ್ಕೆ ಉದಾಹರಣೆ ಹೇಳುವದೆಂದರೆ ಮೊನ್ನೆ ಮೊನ್ನಿನ ಪ್ರಾರ್ಥನೋತ್ತರ ಭಾಷಣದಲ್ಲಿ ರಾತ್ರಿ ಎದ್ದು ಭಕ್ಕರಿಮಾಡುವದರಿಂದ ಎಷ್ಟು ನಿಮಗೆ ಆಹಿತವಾದೀತೆಂದೂ ಅಭ್ಯಾಸಕ್ಕಾಗಿ ವೇಳೆ ಉಳಿಸುತ್ತೇವೆಂದೂ ರಾತ್ರಿಯಲ್ಲಿ ಎದ್ದು ಒಲೆಯ ಮುಂದೆ ಕುಳಿತು ಕೆಲಸ ಮಾಡಿದ ಮೇಲೆ ಆಯಾಸದಿಂದ ತಲೆನೋವುಂಟಾಗಿ ಮುಸುಕು ಹಾಕಿ ಮಲಗಿಕೊಳ್ಳುವದು, ಅಥವಾ ಅಭ್ಯಾಸಕ್ಕೆ ಪುಸ್ತಕ ಹಿಡಿದುಕೊಂಡು ಕುಳಿತಾಗ್ಗೆ ತೂಕಡಿಸುತ್ತ ಕೂಡುವದು, ಶಾಲೆಯಲ್ಲಿ ತೂಕಡಿಸುವದು ಇದರಿಂದ ಅಭ್ಯಾಸವೆಲ್ಲ ಹಾಳು ಎಂದು ಹೇಳಿದ್ದರೂ ಸಹ ಇಂದು ಮುಂಜಾನೆ ಏಳುವ ಮೊದಲೇ ಭಕ್ಕರಿ ಮಾಡುತ್ತ ಕುಳಿತಿರುವದರಿಂದ ಆಶ್ಚರ್ಯವೆನಿಸಿತು

ಇದೇ ಪ್ರಕಾರವಾಗಿ ನಾಲ್ಕು ಜಾತಿಗಳನ್ನು ಮಾಡಿ ಮುಂದೆ ಅದೇ ದ್ವೇಷಕ್ಕೆ ಕಾರಣವಾಯಿತು. ಬ್ರಾಹ್ಮಣನೆಂದೊಡನೆ ತಾನಾಗಿಯೆ ವಿದ್ಯೆ ಬರುವದೆಂದಿಲ್ಲ. ಶೂದ್ರನೆಂದೊಡನೆ ಬಾರದಿರುವದಿಲ್ಲ. ಇದರಂತೆ ತಪಶ್ಚರ್ಯವೂ ಹೌದು. ಮೊದಲು ಈಗ ನಮಗೆ ತಪಶ್ಚರ್ಯದ ಅರ್ಥವೇ ಸರಿಯಾಗಿ ಆಗಿಲ್ಲ. 'ತಪ' ಎಂದರೆ ದೇಹ ದಂಡಿಸುವದು. ನಾವು ಯಾವದೇ ಒಂದು ಒಳ್ಳೆಯ ಕೆಲಸಕ್ಕಾಗಿ ದೇಹವನ್ನು ದಂಡಿಸುವದರಿಂದಲೇ ತಪಸ್ಸಿನ ಫಲ ದೊರೆಯುವದು. ಕೇವಲ ಒಂದು ಮೂಲೆಯಲ್ಲಿ ಮೂಗು ಹಿಡಿದು ಕೂಡುವದು ತಪಶ್ಚರ್ಯವಲ್ಲ. ಅಥವಾ ಗೋಡೆ ಕಂಬಗಳನ್ನು ಮಾತನ್ನಾಡಿಸುವದೂ, ನಡೆಸುವದೂ ತಪಶ್ಚರ್ಯದ ಫಲವಲ್ಲ. ಮೊದಲು ಸಂಸ್ಥೆಯನ್ನು ಸ್ಥಾಪನ ಮಾಡಿದವರಿಗೆ ಕಡೆತನಕ ಅಷ್ಟೇ ಶಕ್ತಿ ಇರುವುದಿಲ್ಲ. ಅವರು ಮೊದಲು ದುಡಿದದ್ದರ ಪರಿಣಾಮವಾಗಿ ಈಗ ಏನಾದರೂ

ಅನುಕೂಲ ಪರಿಸ್ಥಿತಿ ಬಂದಿದ್ದರೆ ಈಗ ಮುಪ್ಪಿನ ಕಾಲದಲ್ಲಿ ಮಂಚದ ಮೇಲೆ ಮಲಗಬಹುದು ನಾಲ್ಕು ಜನರಿಂದ ಸೇವೆಮಾಡಿಸಿಕೊಳ್ಳಬಹುದು. ಆದರೆ ಜನರಿಗೆ ಹಿಂದೆ ಇವರು ದುಡಿದದ್ದು ಗೊತ್ತಿಲ್ಲದ ಮೂಲಕ ಅವರು ಇವರಿಗೆ ಬೇಕಾದ ಮಾತನ್ನಾಡಬಹುದು. ಇವರು ಮೊದಲು ತಾವು ದುಡಿದದ್ದನ್ನು ಹೇಳಿಕೊಳ್ಳುತ್ತ ಹೋಗಬಹುದು. ಹೀಗೆ ಜಗತ್ತಿನಲ್ಲಿ ಎಲ್ಲ ಸ್ಥಿತಿಗತಿಗಳೂ ಬದಲಾಗುತ್ತಲೇ ಇರುವದರಿಂದ ಹಿಂದಿನದು ಮುಂದಿನದರ ಅರಿವುಂಟು ಮಾಡಿಕೊಳ್ಳಲು ಎಲ್ಲರೂ ಪ್ರಯತ್ನಿಸಬೇಕು. ಇದರಂತೆ ಬ್ರಾಹ್ಮಣರದ್ದಾದರೂ, ಮೊದಲು ಅವರು ಒಂದು ಕಾರ್ಯ ಮಾಡುತ್ತಿದ್ದುದರಿಂದ ಅವರಿಗೆ ಮರ್ಯಾದೆ ಸಿಗುತ್ತಿತ್ತು. ಆದರೆ ದಿನಗಳೆದಂತೆ ಮುಂದು ಮುಂದಿನ ಪೀಳಿಗೆಯಲ್ಲಿ ಆ ಕಾರ್ಯದಲ್ಲಿ ಆಸಕ್ತಿ ಉಳಿಯದೆ ಹೋಯಿತು. ಸೃಷ್ಟಿಯಲ್ಲಿ ಸ್ಥಿತಿಲಯಗಳು ನಡದೇ ಇರುತ್ತವೆ ಮೊದಲು ಗಳಿಸವದು, ನಂತರ ಗಳಿಸಿದ್ದನ್ನು ಕುಳಿತು ತಿನ್ನುವದು. ಮುಂದೆ ಎಲ್ಲವೂ ನಷ್ಟ ಹೊಂದುವದು. ಇದರಂತೆ ಬ್ರಾಹ್ಮಣರ ಅವಸ್ಥೆಯಾದರೂ ಆಯಿತು. ಮೊದ ಮೊದಲು ಮಾನಮರ್ಯಾದೆ, ಸಂಪತ್ತು ಎಲ್ಲವನ್ನೂ ತಮ್ಮ ಬುದ್ಧಿಶಕ್ತಿಗಳಿಂದ ಗಳಿಸಿದರು. ಮುಂದೆ ಕೆಲವು ತಲೆಮಾರಿನ ನಂತರ ಅವರು ಹಿರಿಯರು ಗಳಿಸಿದ ಮಾನಮರ್ಯಾದೆ ಸಂಪತ್ತುಗಳ ಊರುಗೋಲಿನ ಮೇಲೆ ತಾವೂ ಸಾಗಿದರು. ಬುದ್ಧಿಶಕ್ತಿ ಉಪಯೋಗ ಮಾಡಿ ಗೌರವ ಗಳಿಸಲು ಪ್ರಯತ್ನಿಸಲಿಲ್ಲ. ಮತ್ತು ಮುಂದೆ ಸ್ವಲ್ಪ ತಲೆ ಮಾರಿನ ನಂತರ ಜನರಿಂದ ಬರುವ ಮಾನಮರ್ಯಾದೆಗಳು ಕಡಿಮೆಯಾಗುತ್ತ ಬಂದು ಈಗ ಕೇವಲ ದುಡಿದುಣ್ಣುವ ಪ್ರಸಂಗ ಬಂದಿದೆ.

೧೫—೨—೬೭ :— ನಿಜವಾದ ಯೋಗ್ಯತೆ, ತಪಸ್ಸು ಇವುಗಳಿಂದ ಬ್ರಾಹ್ಮಣರ ವರ್ಚಸ್ಸು ಬಾಕಿ ಇತರ ವರ್ಣದ ಜನರ ಮೇಲೆ ಕುಳಿತು ಅವರು ಬ್ರಾಹ್ಮಣರಿಗೆ ಹೆಚ್ಚಿನ ಸೌಕರ್ಯಕೊಡಹತ್ತಿದರು. ಎಲ್ಲ ವಿಧದಿಂದಲೂ ಅವರಿಗೆ ಸೌಕರ್ಯವಾಗುವಂತೆ ಮಾಡಿಕೊಟ್ಟರು. ಇದರಿಂದ ಅವರ ಯೋಗ್ಯತೆಯು ಒಂದು ಮೆಟ್ಟಲವರೆಗೆ ಏರುತ್ತ ಹೋಯಿತು, ಉಚ್ಚ ಸಂಸ್ಕಾರ

ದೊಳಗಿನ ದೋಷಗಳನ್ನು ಕಡಿಮೆಮಾಡುತ್ತ ಹೋದಂತೆ ಅಂದರೆ ಸಾಮಾನ್ಯ ಜನರ ವೈಶಿಷ್ಟ್ಯ ಬೆಳೆದಂತೆ ಅವರ ದೃಷ್ಟಿಕೋನವು ಕಡಿಮೆಯಾಗಿ ಕೊನೆಗೆ ಒಂದಕ್ಕೊಂದರ ಸಂಬಂಧವು ತಪ್ಪಿಹೋಗುವದು. ಇದರಂತೆ ನಮ್ಮ ಪಾವಿತ್ರ್ಯ ಬೆಳಸುವ ಭರದಲ್ಲಿ ಇತರ ವರ್ಣದವರ ಸಲುವಾಗಿ ಬ್ರಾಹ್ಮಣರು ಮಾಡಬೇಕಾದ ಕರ್ತವ್ಯದಲ್ಲಿ ಚ್ಯುತಿಹೊಂದುತ್ತ ನಡೆದು ಒಬ್ಬರಿಗೊಬ್ಬರು ಸಂಪರ್ಕ ಉಳಿಯದಂತಾಯಿತು. ಇದರಿಂದ ಆಚಾರ ವಿಚಾರಗಳಲ್ಲಿ ಬಹಳೇ ವ್ಯತ್ಯಾಸ ಉಂಟಾಗಿ ಎಲ್ಲರ ಹಿತಕ್ಕಾಗಿ ಮಾಡಬೇಕಾದ ತಪಶ್ಚರ್ಯದ ಜೀವನವು ಹಾಳಾಗಿ ತಾಪಸಿ ಜೀವನಕ್ಕೆ ಬ್ರಾಹ್ಮಣರು ಪ್ರಾರಂಭ ಮಾಡಿದರು. 'ಇನರ್ಶಿಯಾ'ದ ತತ್ವಕ್ಕನುಗುಣವಾಗಿ ಗಂಡು ಹೆಣ್ಣುಗಳು ಹೆಚ್ಚಿನ ವಿಕಾಸ ಹೊಂದದೆ, ಇದ್ದದ್ದರಲ್ಲಿ ಕೊಳೆಯಹತ್ತಿದರು. ಮೊದ ಮೊದಲು ಯಾವದೇ ಜಾತಿಯವರಿದ್ದರೂ ಲಗ್ನವಾಗುವ ಪದ್ಧತಿ ಇತ್ತು. ಆದರೆ ಮುಂದೆ ಹೆಣ್ಣುಮಕ್ಕಳ ಪಾವಿತ್ರ್ಯದ ಕಲ್ಪನೆ ಬೆಳೆದಂತೆ ಜಾತಿ ಜಾತಿಗಳಲ್ಲಿ ಒಡಕು, ಮತಭೇದಗಳು ಹುಟ್ಟಹತ್ತಿ ಕೆಲವು ಕಾಲ ಇತರ ಹೆಣ್ಣುಮಕ್ಕಳ ಅಥವಾ ಇತರ ಜಾತಿಯವರ ಕೈಲಿ ನೀರನ್ನು ಸಹ ಕುಡಿಯುವುದು ಕೀಳೆಂಬ ಮಟ್ಟಕ್ಕೆ ವಿಚಾರವು ಬಂದಿತು. ಮುಂದೆ ಮುಂದೆ ಇನ್ನೂ ಸುಧಾರಿಸುತ್ತ ಹೋದಂತೆ ಆರೋಗ್ಯ ಶಾಸ್ತ್ರದಲ್ಲಿ ಸ್ತ್ರೀಯರು ಬಹಿಷ್ಠೆಯರಾದಾಗ ಅವರಿಗೆ ವಿಶ್ರಾಂತಿ ಸಿಗಬೇಕೆಂಬ ಉದ್ದೇಶದಿಂದ ಮೂರು ದಿನಗಳ ವರೆಗೆ ಯಾವ ಕೆಲಸವೂ ಹಚ್ಚದೆ ಆರಾಮು ತೆಗೆದುಕೊಳ್ಳಲೆಂದು ರಜೆಯನ್ನು ಕೊಡುತ್ತಿದ್ದರು. ಕಾಲಕ್ರಮೇಣ ಅವಳನ್ನು ಯಾರೂ ಮುಟ್ಟಬಾರದೆಂದೂ, ಅವಳು ಮೈಲಿಗೆಯವಳೆಂದೂ, ಅವಳ ಮಾತು ಸಹ ಮಡಿವಂತರ ಕಿವಿಗೆ ಬೀಳಬಾರದೆನ್ನುವಷ್ಟು ಧರ್ಮದ ಹುಚ್ಚುಕಲ್ಪನೆಯಾಯಿತು. ಈರೀತಿ ಹೆಣ್ಣುಮಕ್ಕಳನ್ನು, ಇತರ ಕೆಳವರ್ಣದ ಜಾತಿಯವರನ್ನು ಒಂದು ರೀತಿಯಿಂದ ಧರ್ಮಬಂಧನದಲ್ಲಿಟ್ಟು ಬ್ರಾಹ್ಮಣರೆನಿಸಿಕೊಂಡವರು—ತಾವು ಐಷಆರಾಮು ಮಾಡಹತ್ತಿದರು. ದೇವರು ಜಗತ್ತಿನಲ್ಲಿ ಗಂಡು-ಹೆಣ್ಣುಗಳು ಕೂಡಿ ಪ್ರಜೋತ್ಪಾದನ ಮಾಡಿ ಒಬ್ಬರಿಗೊಬ್ಬರ ಕೆಲಸಕ್ಕೆ ನೆರವಾಗಲೆಂದು ಮಾನವರನ್ನು ಹುಟ್ಟಿಸಿದ್ದು ಮುಂದೆ ತಂತಮ್ಮ ಸೋವಿಗೆಂದು ಬೇರೆ ಬೇರೆ ಪಂಗಡಗಳಾಗಿ ಮೊದಲು ಅದು ಒಳ್ಳೇ ರೀತಿಯಿಂದ ನಡೆದುಕೊಂಡು

ಬಂದು ಕಾಲಕ್ರಮೇಣ ಹೆಚ್ಚಿನ ಬುದ್ಧಿಯುಳ್ಳ ಪಂಡಿತರು ಅಲ್ಪಮತಿಯುವರಿಗೆ ವಿಚಾರಮಾಡಲು ಬಾರದಂಥಹ ತತ್ವಗಳನ್ನು ಹೊರಡಿಸಿದರು ಮತ್ತು ಕೆಳಜಾತಿಯವರೂ ಹಾಗೂ ಹೆಣ್ಣುಮಕ್ಕಳೆಂದೆನಿಸಿಕೊಂಡವರೂ ತಮ್ಮ ಸೇವೆಗಾಗಿಯೇ ಇರುವರೆಂದೂ ಅದೇ ಅವರ ಧರ್ಮವೆಂದೂ ಅದನ್ನು ತಪ್ಪಿದಲ್ಲಿ ಅವರಿಗೆ ನರಕಪ್ರಾಪ್ತಿಯಾಗುವದೆಂದೂ ಸಾವಿರಾರು ಶಾಸ್ತ್ರಗಳನ್ನು ಬರೆದಿಟ್ಟು ದಿನ ದಿನವೂ ಅವರ ತಲೆಯಲ್ಲಿ ಅದನ್ನೇ ತುಂಬಹತ್ತಿದರು. ಈರೀತಿ ಮೂಲಶಾಸ್ತ್ರದ ವಿಪರ್ಯಾಸ ಮಾಡಿ ತಮ್ಮ ಕಾರ್ಯ ಸಾಧಿಸಹತ್ತಿದರು. ಈತೆರನಾಗಿ ವ್ಯವಹಾರ ಬಿಟ್ಟು ಕೇವಲ ತಾತ್ವಿಕ ವಿಚಾರದಲ್ಲಿಯೇ ಮಗ್ನರಾಗಿದ್ದರಿಂದ ಅದಕ್ಕೆ ಪೋಷಕವಾಗುವಂಥಹ ಸೂಕ್ಷ್ಮ ತತ್ವಗಳು ಹೊರಡುವದು ಸ್ವಾಭಾವಿಕ. ಇದರಿಂದ ನಷ್ಟವಾಗುವದೂ ಸ್ವಾಭಾವಿಕ. ಹೀಗೆ ಆಹಾರ ವಿಹಾರಗಳಿಂದ ತಪ್ಪಾಗಿ ಜಡ್ಡು ಬರಬಹುದು. ಜಡ್ಡಿನಲ್ಲಿ ಜಂತುಗಳು ಹುಟ್ಟುವವು. ಆ ಜಂತುಗಳ ಉತ್ಪತ್ತಿಯು ಜಡ್ಡು ಹೆಚ್ಚಾಗಲು ಕಾರಣವಾಗುವದು. ಇದರಿಂದ ಶಾಸ್ತ್ರಜ್ಞರು ಶೋಧ ಮಾಡಿದ್ದೇನಂದರೆ, ಜಡ್ಡಿಗೆ ಮೂಲಕಾರಣ ಆಹಾರ ವಿಹಾರವೆಂಬದನ್ನು ಮರೆತು ಈ ಜಂತುಗಳೇ ಜಡ್ಡಿಗೆ ಮೂಲ ಕಾರಣವೆಂದು ಇದರಿಂದ ತಮ್ಮ ತಪ್ಪು ಎರಡನೇಯವರ ಮೇಲೆ ಹಾಕುವದು. ಸ್ವಾಭಾವಿಕ ಪ್ರವೃತ್ತಿಯಂತೆ ಸಾಮಾನ್ಯ ಜನರ ಕಲ್ಪನೆಯಾಗಿದ್ದೇನೆಂದರೆ ಆಹಾರ ವಿಹಾರಗಳ ತಪ್ಪಿಗಿಂತ ಜಂತುಗಳೇ ಮೂಲಕಾರಣವೆಂದು ಅವರು ಆ ಜಂತುಗಳಿಗೆ ಬಹಳ ಹೆದರಿದ್ದಾರೆ. ಇದರಂತೆ ಬ್ರಾಹ್ಮಣರಾದರೂ ಉಚ್ಚಸಂಸ್ಕಾರಗಳಿಗೆ ಧಕ್ಕೆ ಬರುವದೆಂಬ ಹೆದರಿಕೆಯಿಂದ ಸ್ತ್ರೀಯರ ಸಲುವಾಗಿ ಒಂದು ಮಾದರಿ ತಿರಸ್ಕಾರ ಹುಟ್ಟುವಂತೆ ಮೈಲಿಗೆ ಕಲ್ಪನೆಗೆ ಅತಿ ಮಹತ್ವಕೊಟ್ಟು ಸ್ತ್ರೀಯರು ಬಹಿಷ್ಟೆಯರಾದಾಗ ಅವರನ್ನು ಕೀಳೆಂದು ಬಗೆದು ಅವರ ಆಹಾರ ವಿಹಾರ ಮತ್ತು ಉಡಿಗೆ ಆರೋಗ್ಯ ಮುಂತಾದುದರ ಕಡೆಗೆ ತೀರ ಅಲಕ್ಷ್ಯ ಮಾಡಿ ಮಡಿವಂತರು, ಧರ್ಮಗುರುಗಳು ಮತ್ತು ಪ್ರತಿಷ್ಠರು ಅವರ ಧ್ವನಿ ಸಹ ಕೇಳಬಾರದೆಂದು ಕಟ್ಟಪ್ಪಣೆ ಮಾಡಿದ್ದರಿಂದ ಬಹಿಷ್ಠೆಯರಾದ ಕಾಲದಲ್ಲಿ ಅವರ ಜೀವನವು ಬಾಳಿಗೆ ಬಾರದಷ್ಟು [illegible] ಪರಿಣಮಿಸಿದ್ದಾರೆ.

೧೬—೨—೪೮ : — ಯಾವಾಗಿದ್ದರೂ ಕೃತ್ರಿಮ ಆಳಿಕೆಯಲ್ಲಿ ಚಟದ ಮಹತ್ವವಿರುತ್ತದೆ ಈಗ ಹ.ಡ.ಗರಿಗೆ ಬೇರೆ ಬೇರೆ ಒಳ್ಳೇ ಚಟ ಹಚ್ಚದೆ ಸ್ವಾತಂತ್ರ್ಯ ಕೊಟ್ಟರೆ ತಮ್ಮ ಮನಸ್ಸಿಗೆ ಬಂದಂತೆ ಮಾಡಹತ್ತಿದರೆ ಮುಂದೆ ಅದೇ ಮಾತು ದೊಡ್ಡದಾಗಿ ಅದರಿಂದಲೇ ಕೊಟ್ಟ ಸ್ವಾತಂತ್ರ್ಯವನ್ನು ಹಿಂತೆಗೆದುಕೊಳ್ಳುವ ಪ್ರಸಂಗ ಬರುತ್ತದೆ. ಕೃತ್ರಿಮ ಆಯುಷ್ಯದಲ್ಲಿ ಪ್ರತಿಯೊಬ್ಬನಿಗೆ ತೀರ ಅವಶ್ಯಕವಿದ್ದ "ಆಹಾರ ನಿದ್ರಾ ಭಯ ಮೈಥುನಾನಿ" ಇವುಗಳ ಕೊರತೆ ಇವೆ. ಮನುಷ್ಯನಿಗೆ ಒಬ್ಬರಿಗೊಬ್ಬರ ಸಹಾಯವಾಗುತ್ತದೆ. ಕೆಲವು ಕಡೆ ತಿರಸ್ಕಾರ ಹುಟ್ಟಿರುತ್ತದೆ. ಮತ್ತೆ ಅದರಿಂದಲೇ ಆಕರ್ಷಣವೂ ಶುರುವಾಗುತ್ತದೆ. ಹೀಗೆ ಜಗತ್ತಿನಲ್ಲಿ ಗೊಂದಲವು ಹಿಂದುಮುಂದಾಗಿ ಒಂದಕ್ಕೆ ಮತ್ತೊಂದು ಸಂಬಂಧವಿಟ್ಟುಕೊಂಡು ನಡದೇ ಇರುತ್ತದೆ. ಇವೆಲ್ಲವನ್ನೂ ಕೃತ್ರಿಮರೀತಿಯಿಂದ ಬಿಡಿಸ ಹೋದರೆ ಕೆಲವೊಂದು ವೇಳೆ ಅದು ಬಿಡಿಸಲಾಗುವದಿಲ್ಲ. ಜಗತ್ತಿನಲ್ಲಿ ದೈವೀಶಕ್ತಿಯು ಆಳಿಕೆ ಇಲ್ಲವೆಂದು ತಿಳಿದರೆ ಕೃತ್ರಿಮರೀತಿಯಿಂದ ಎಲ್ಲ ಪ್ರಶ್ನೆಗಳೂ ಬಿಡಿಸಲು ಬರಬೇಕಾಗುತ್ತಿತ್ತು. ಆದ್ದರಿಂದ ಜಗತ್ತಿನಲ್ಲಿ ದೈವೀಶಕ್ತಿ ಇಲ್ಲವೆಂದು ಹೇಳಲು ಬರುವಂತಿಲ್ಲ. ಈಗ ನಾವು ಪಶುಪಕ್ಷಿಗಳನ್ನು ನೋಡಿದರೆ ಒಂದೇ ಜಾತಿಯ ಪ್ರಾಣಿಗಳಲ್ಲಿ ಅಷ್ಟು ಭೇದಗಳು ಕಾಣಿಸುವುದಿಲ್ಲ. ಆದರೆ ಮಾನವ ಮಾನವರಲ್ಲಿ ಭೂಮಿ ಆಕಾಶದಷ್ಟು ವ್ಯತ್ಯಾಸ ಕಂಡುಬರುತ್ತದೆ. ಮೊದಲು ಶ್ರೀಮಂತರಿದ್ದವಂಗೆ ಕಡೆಗೆ ಯಾವದೇ ಕಾರಣದಿಂದ ಬಡತನ ಬಂದರೆ ಅವರಿಗೆ ಬಹಳ ತ್ರಾಸಾಗುತ್ತದೆ ಹೀಗಾದೊಡನೆ ಅದರ ಮೂಲ ಹುಡುಕಬೇಕು. ಇದರಂತೆ ಹೆಣ್ಣುಮಕ್ಕಳ ವಿಷಯವಾದರೂ ಆಗಿದೆ. "ಯತ್ರ ನಾರ್ಯಾಸ್ತು ಪೂಜ್ಯಂತೆ ರಮಂತೆ ತತ್ರದೇವತಾಃ" ಎಂದು ಹೇಳುವಾಗ ಕಿವಿಗೆ ಇಂಪಾಯಿತು. ಮತ್ತು ಹೆಂಗಸರನ್ನು ಅಜ್ಞಾನದಲ್ಲಿಟ್ಟು ಗಂಡಸರು ಅದರ ಲಾಭ ತೆಗೆದುಕೊಂಡರು. ಇದರಿಂದ ಹೆಂಗಸು ಅಜ್ಞಾನಿಯಾಗಿ ಕೇವಲ ಸುಖದ ಸಲುವಾಗಿಯಷ್ಟೇ ಇಚ್ಛೆ ಮಾಡಹತ್ತಿದಳು. ಆದರೆ ಜಗತ್ತು ಸುಧಾರಿಸಿದಂತೆ ಕೆಲವು ನ್ಯಾಯನಿಷ್ಠುರ ಗಂಡಸರು ಹೆಂಗಸರ ಮೇಲಾಗುತ್ತಿರುವ ಅನ್ಯಾಯದ ಖಂಡನೆ ಮಾಡಹತ್ತಿದರು. ಕೆಲವು ಹೆಂಗಸರು ಇದಕ್ಕೆ ಪುಟಕೊಟ್ಟು ಮುಂದಾಗಹತ್ತಿದರು. ಮುಂದೆ ಅವರೂ ಓದುಬರಹ ಕಲಿತು ತಲೆ ಎತ್ತ

ಹತ್ತಿದರು. ದಿನಗಳೆದಂತೆ ಆಸ್ತಿ, ಮನೆ, ಹಕ್ಕು ಇವುಗಳ ಸಲುವಾಗಿ ಕೃತ್ರಿಮ ಆಯುಷ್ಯದಲ್ಲಿ ಜಗಳ ಬರಹತ್ತಿತು ಆದರೆ ಅವರು ಇನ್ನೂ ಪೂರ್ಣ ಜ್ಞಾನಿಗಳಲ್ಲದ್ದರಿಂದಲೂ, ಹಿಂದಿನಿಂದ ಬಂದ ಅವರ ಸಂಸ್ಕಾರವು ತಲೆಯೊಳಗಿಂದ ಸಂಪೂರ್ಣವಾಗಿ ಅಳಿಸಿರದ್ದರಿಂದಲೂ ಕಸ್ಟಪಡಲು ಹಿಂಜರಿಯುವ ಸ್ವಭಾವವುಳ್ಳವರಾಗಿದ್ದರಿಂದಲೂ ಅವರಿಗೆ ಆಸ್ತಿ ಮನೆಗಳಿಂದ ಕೆಡಕೇ ಆಗಹತ್ತಿತು. ಹೆಣ್ಣುಮಕ್ಕಳ ನೀತಿನಿಯಮಗಳು ಸಹ ಈ ದುಡ್ಡಿನ ಪರಿಣಾಮದಿಂದ ಏನೇನು ಆಗಿದೆ ಎನ್ನುವದನ್ನು ನಾಳೆ ನೋಡೋಣ.

೧೩—೩—೪೮ :— ನಮ್ಮಲ್ಲಿ ಕೆಲವರಿಗೆ, "ಈ ಜಗತ್ತಿನಲ್ಲಿ ಹಕ್ಕು ಬಾಧ್ಯತೆ, ಕೀರ್ತನ, ಮೇಲ್ತನ, ರಾಷ್ಟ್ರಪುರುಷರ ಕೊಲೆ ಇವುಗಳ ಗೊಂದಲ ಹೀಗೆ ಏನೇನೋ ನಡೆದಿರುವಾಗ ನಮ್ಮಲ್ಲಿ ಕೇವಲ ಈ ಹೆಣ್ಣುಮಕ್ಕಳ ವಿಷಯವನ್ನೇಕೆ ಮುಂಜಾನೆ ಎದ್ದು ತೆಗೆಯುವರೆಂದೆನಿಸಬಹುದು ಹೊರಗಿನ ಜಗತ್ತಿಗಂತೂ ಈ ವಿಷಯದ ಸಲುವಾಗಿ ಹೇಳಬೇಕಾದದ್ದಿಲ್ಲ ಮೊದಲು ಖಾದಿಯ ಸಲುವಾಗಿ ಮೂಗು ಮುರಿಯುತ್ತಿದ್ದರೂ ಸಹ ಈಗ ಅದಕ್ಕೆ ಮಹತ್ವ ಬರಹತ್ತಿತು. ಪ್ಯಾರಿಸಿನಿಂದ ಬಣ್ಣದ ಅರಿವೆ ತರಿಸಿ ಉಡುವ ಸರೋಜಿನಿನಾಯ್ಡು ಈಗ ಉರುಟ ಖಾದಿಯನ್ನುಟ್ಟು ರಾಷ್ಟ್ರಸೇವೆಗಾಗಿ ಟೊಂಕಕಟ್ಟಿ ನಿಂತಳು. ಮ. ಗಾಂಧಿಯವರು ಉಪವಾಸ ಮಾಡಿದರೆ, ರಾಜಗೋಪಾಲಾಚಾರ್ಯರು ತಮ್ಮ ಅರಿವೆ ಒಗೆದರೆ ಇದನ್ನು ದೊಡ್ಡ ಅಕ್ಷರದಲ್ಲಿ ವರ್ತಮಾನಪತ್ರದಲ್ಲಿ ಕೊಡುತ್ತಾರೆ. ಆದರೆ ಒಬ್ಬ ರೈತನು ಜನಹಿತಕ್ಕಾಗಿ ದುಡಿಯುವವನು, ಪ್ರತಿದಿನ ಅರೆಹೊಟ್ಟೆಯುಂಡು, ಹರಕು ಬಟ್ಟೆಯುಟ್ಟು ಕಾಲಕ್ಷೇಪಮಾಡಿದರೂ ಸಹ ಯಾರೂ ಲಕ್ಷ್ಯಕೊಡುವುದಿಲ್ಲ. ಅದರಂತೆ ಯಾರಾದರೂ ನಮ್ಮ ಸಂಸ್ಥೆಗೆ ದೇಣಿಗೆ ಕೊಟ್ಟ ವಿಷಯವನ್ನು ವರ್ತಮಾನಪತ್ರದಲ್ಲಿ ಹಾಕಿರೆಂದರೆ ಅದರ ಕಡೆಗೆ ಅವರು ಅಲಕ್ಷ್ಯಮಾಡುತ್ತಾರೆ. ಹೀಗೆ ಜಗತ್ತಿನಲ್ಲಿ ಎಲ್ಲರಿಗೂ ದೊಡ್ಡ ಸ್ಥಾನ ಬೇಕಾಗುತ್ತದೆ. ದೊಡ್ಡವರು ಮಾಡಿದ್ದನ್ನು ಹೊಗಳಬೇಕಾಗುತ್ತದೆ ಯಾರ ಹೆಸರು ಜಗತ್ತಿನಲ್ಲಿ ಮುಂದೆ ಬಂದಿರುವದೋ ಅವರ ಬೆನ್ನು ಹತ್ತುವವರೇ ಹೆಚ್ಚಾಗಿ. ಈ ಸಾಮಾನ್ಯ ಜನರಲ್ಲಿ [illegible] ಬುದ್ಧಿವಂತನೆನ್ನಿಸಬೇಕೆನ್ನುವ

ಹಂಬಲ ಯಾರಿಗೂ ಇಲ್ಲ. ಇವೆಲ್ಲ ನೋಡುತ್ತಿರಲಾಗಿ ಈ ಹೆಣ್ಣುಮಕ್ಕಳ ದುಃಖದಿಂದ ರಾಷ್ಟ್ರದ ಮೇಲೆ ಬಹಳ ಕೆಟ್ಟ ಪರಿಣಾಮವಾಗುತ್ತದೆ. ಆದ್ದರಿಂದ ಕ್ಷುಲ್ಲಕ ವಿಷಯವೆನ್ನದೆ ಹೆಣ್ಣುಮಕ್ಕಳ ಪ್ರಶ್ನೆಯನ್ನು ಹೇಗೆ ಬಿಡಿಸಬೇಕೆನ್ನುವದನ್ನು ನಾವೇ ಬಿಡಿಸದಿದ್ದರೆ ಮತ್ತಾರು ಬಿಡಿಸಬೇಕು? ಚರ್ಚಿಸಲ್ಪಟ್ಟ ವಿಷಯವು ಸಣ್ಣದೋ ದೊಡ್ಡದೋ ಎಂಬುವದನ್ನು ಚರ್ಚಿಸುವ ಮನುಷ್ಯನ ಯೋಗ್ಯತೆಯನ್ನು ಅವಲಂಬಿಸಿದೆ.

೧೮—೨—೪೮:— ಆರೋಗ್ಯವೆನ್ನುವದು ಸ್ವಾಭಾವಿಕ. ಅನಾರೋಗ್ಯವು ನಮ್ಮ ತಪ್ಪಿನಿಂದ ಬಂದದ್ದು. ಹೆಣ್ಣುಮಕ್ಕಳಿಗೆ ಹುಟ್ಟಿದಂದಿನಿಂದ ಸಾಯುವವರೆಗೆ ಏನಾದರೊಂದು ರೋಗ ಇದ್ದೇ ಇರುತ್ತದೆ ಕೆಲವು ರೋಗಗಳು ಗಂಡಸು ಹೆಂಗಸು ಇಬ್ಬರಿಗೂ ಇದ್ದಾಗ್ಯೂ ಹೆಣ್ಣುಮಕ್ಕಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾಣಿಸುತ್ತವೆ. ಕೆಲವು ಐಚ್ಛಿಕವಾಗಿ ತಪ್ಪುಗಳನ್ನು ಮಾಡುವದರಿಂದ ಸ್ವಾಭಾವಿಕವಾಗಿರುತ್ತವೆ ಸ್ತ್ರೀಯರ ಪಾರತಂತ್ರ್ಯದಿಂದ ಈ ರೋಗದ ಪ್ರಮಾಣವು ಸ್ತ್ರೀಯರಲ್ಲಿ ಜಾಸ್ತಿಯಾಗಿದೆ. ಗರ್ಭಕೋಶದಲ್ಲಿ ರೋಗ, ಹುಣ್ಣು ಮೊದಲಾದ ಜನನೇಂದ್ರಿಯಕ್ಕೆ ಸಂಬಂಧಪಟ್ಟ ರೋಗಗಳೇ ಸ್ತ್ರೀಯರಲ್ಲಿ ಜಾಸ್ತಿ. ಗಂಡಸರ ಸುಖಕ್ಕಾಗಿ ಹೆಂಗಸರು ರೋಗ ಅನುಭವಿಸಬೇಕು. ಹೆಣ್ಣುಮಕ್ಕಳು ಸ್ವಾತಂತ್ರ್ಯಕ್ಕಾಗಿ ಬಡಿದಾಡುತ್ತಿದ್ದರೂ ಸಹ ಅವರ ಜ್ಞಾನವಿನ್ನೂ ಬಾಲ್ಯಾವಸ್ಥೆಯಲ್ಲಿರುವದರಿಂದ ತಮ್ಮ ದೇಹದ ಮೇಲಿನ ಸ್ವಾತಂತ್ರ್ಯ ಉಳಿಸಿಕೊಳ್ಳಲು ಅವರಿಗೆ ಸಾಧ್ಯವಿಲ್ಲದಾಗಿದೆ. ಹೆಣ್ಣುಮಕ್ಕಳ ಕರ್ತವ್ಯವೆಂದು ಅನೈಚ್ಛಿಕವಾಗಿ ಕೆಲಸವನ್ನು ಅವರ ಮೇಲೆ ಒತ್ತಾಯದಿಂದ ಹೇರುವದರಿಂದ ಅವರ ಆರೋಗ್ಯಕ್ಕೆ ಹಾನಿಯಾಗುತ್ತದೆ. ಆದರೆ ಐಚ್ಛಿಕವಾಗಿ ಮಾಡಿದಲ್ಲಿ ಅವರ ದೇಹದ ಮೇಲೆ ಅಷ್ಟು ಕೆಟ್ಟ ಪರಿಣಾಮವಾಗುವದಿಲ್ಲ. ಈ ಎಲ್ಲ ಪರಿಸ್ಥಿತಿಯ ವಿಚಾರ ಮಾಡುತ್ತಿರಲಾಗಿ ಇಡೀ ಜಗತ್ತಿನಲ್ಲಿ ಎಲ್ಲರಿಗೂ ಇದು ದುಃಖ ಕೊಡುವಂಥಹದಾಗಿದೆ. ಆದ್ದರಿಂದ ಹುಟ್ಟಿದ ಮಕ್ಕಳಾದರೂ ಯೋಗ್ಯರಾಗುವದಿಲ್ಲ. ರಕ್ತದ ಗುಣದಿಂದಲೇ ರೋಗ ಬರುವದೂ ಬಿಡುವದೂ ಅವಲಂಬಿಸಿದೆ. ಅದರಲ್ಲಿ ಎರಡು ಭಾಗವಿದ್ದು ದೇಹದ ಪ್ರಾಣಾಣು ... ಒಂದು, ಕೆಟ್ಟದ್ದನ್ನು ದೇಹದ ಹೊರಗೆ

ಹಾಕುವದೊಂದು. ಮೇಲೆ ಮೇಲೆ ಪರಿಣಾಮ ಮಾಡುವಂಥ ಸಂಗತಿಗಳಿಂದ ದೇಹ ಮನಸ್ಸಿನ ಮೇಲೆ ಪರಿಣಾಮವಾಗುತ್ತದೆ. ಆರೋಗ್ಯದ ಕಡೆಗೆ ಲಕ್ಷಕೊಡದೆ ಕರ್ತವ್ಯ ಬುದ್ಧಿಯಿಂದ ದೇಹದ ಕಡೆಗೆ ಅಲಕ್ಷ ಮಾಡಿದರೂ ಸಹ ದೇಹಕ್ಕೆ ಅನಾರೋಗ್ಯ. ಇದರಿಂದಲೇ ದೊಡ್ಡ ದೊಡ್ಡ ತತ್ವಜ್ಞರಾದರೂ ರೋಗದಿಂದ ಬಳಲುತ್ತಿದ್ದಾರೆ.

೧೯—೨—೪೮:— ಒಟ್ಟಿನ ಮೇಲೆ ಆರೋಗ್ಯದ ನಿಯಮಗಳನ್ನು ಐಚ್ಛಿಕವಾಗಿಯಾಗಲೀ ಅನೈಚ್ಛಿಕವಾಗಿಯಾಗಲೀ ಭಂಗ ಮಾಡುತ್ತಿರುವದರಿಂದ ದಿನದಿನಕ್ಕೆ ಮನುಷ್ಯನ ಆರೋಗ್ಯವು ಕೆಡಹತ್ತಿದೆ. ಜೇಲಿನಲ್ಲಿದ್ದವರಿಗೆ ಹೊರಗಿನವರಷ್ಟು ಕೆಟ್ಟ ಬೇನೆಗಳು ಬರುವುದಿಲ್ಲ ಏಕೆಂದರೆ ಅಲ್ಲಿ ವೇಳೆಗೆ ಸರಿಯಾಗಿ ಆಹಾರ, ತಕ್ಕಷ್ಟು ವ್ಯಾಯಾಮ ಸಿಗುತ್ತದೆ. ಆದರೆ ಅಲ್ಲಿನ ಕೆಟ್ಟ ಹವೆಯಿಂದ ಮಾತ್ರ ದೇಹಕ್ಕೆ ಸ್ವಲ್ಪ ತ್ರಾಸಾಗಬಹುದು. ಇದರಂತೆ ಹೆಂಗಸರಿಗಾದರೂ ಸಹ ಕೆಲವರಿಗೆ ವ್ಯಾಯಾಮವು ಏನೂ ಇರುವುದಿಲ್ಲ ಕೆಲವರಿಗೆ ಹೆಚ್ಚಿನ ದುಡಿತ. ಹೀಗಾಗಿ ಇಬ್ಬರಿಗೂ ಜಡ್ಡಾಗುತ್ತದೆ. ಅವರು ಹೊರಗೆ ಹೋಗುವ ಹಾಗಿಲ್ಲ. ಮನೆಯಲ್ಲೇ ಮಕ್ಕಳ ಜೋಪಾನ ಮನೆಯ ಪರಿಸ್ಥಿತಿಗೆ ಅಂಟಿಕೊಂಡು ಹೋಗಲು ಅವರಿಗೆ ಸತತ ಉಪದೇಶ. ಗಂಡಸರು ದಿನಗಳೆದಂತೆ ಸುಧಾರಿಸುತ್ತಿರುವದರಿಂದ ವ್ಯಾಪಾರ ಉದ್ಯೋಗಗಳು ಬೆಳೆಯ ಹತ್ತಿದ್ದರಿಂದ ಅವರು ಬೇರೆ ಬೇರೆ ಸ್ಥಳಗಳಲ್ಲಿ ಓಡಾಡುವ ಪ್ರಸಂಗ ಬಂದುದರಿಂದ ಅವರಿಗೆ ಸಾಕಷ್ಟು ವ್ಯಾಯಾಮ ಒಳ್ಳೆಯ ಹವೆ ಸಿಕ್ಕು ಆರೋಗ್ಯದಿಂದಿರುತ್ತಾರೆ.

ಗಂಡಸರು ಹೆಣ್ಣುಮಕ್ಕಳಿಗೆ ಹೊರಗೆ ಓಡಾಡಲು ಬಾರದಂತೆ ಕಟ್ಟಳೆಗಳನ್ನು ಹಾಕಿ ಅವರನ್ನು ಇಲ್ಲದ ಸಲ್ಲದ ಚಟಕ್ಕೆ ಹಚ್ಚಿ ತಾವು ಬೇಕಾದಲ್ಲಿ ತಿರುಗಾಡಲು ಹತ್ತಿದರು. ಹೆಣ್ಮಕ್ಕಳನ್ನು ಪರಊರಿಗೆ ಲಗ್ನ ಮಾಡಿಕೊಡುವದರಿಂದ ತಿರುಗಿ ತಾಯಿಯ ಮನೆಗೆ ಬರುವ ಆಸೆಯಿಲ್ಲದಂತೆ ಮಾಡಹತ್ತಿದರು. ಮನೆಯಲ್ಲಿ ಯಾರೇ ಸತ್ತರೆ ಮನೆಯ ಆಪ್ತೆಷ್ಟರಿಗೆ ಸೂತಕವೆಂದು ಮಾಡುತ್ತಾರೆ. ಆದರೆ ಮನೆಯ ಹೆಣ್ಣುಮಗಳಿಗೆ ಲಗ್ನ ಮಾಡಿಕೊಟ್ಟೊಡನೆ

ಅವಳಿಗೆ ಯಾವದೇ ತರದ ಸೂತಕವಿಲ್ಲ. ಕೇವಲ ಹಡೆದ ತಪ್ಪಿಗಾಗಿ ತಂದೆ ತಾಯಿಗಳು ಸತ್ತರೆ ಮಾತ್ರ ಮರುದಿನ ಸೂತಕ. ಹೆಣ್ಣುಮಕ್ಕಳ ಹೆಸರು ಗೋತ್ರ ಎಲ್ಲವೂ ಬದಲು.

ಸಣ್ಣಂದಿನಲ್ಲಿ ಗಂಡ-ಹುಡುಗರಂತೆ ಹೆಣ್ಣುಹುಡುಗಿಯರಾದರೂ ಆಟ ಪಾಟಗಳಾಡುವದು ಸ್ವಾಭಾವಿಕ. ಆದರೆ ಹೆಣ್ಣಿಗೆ ಸಣ್ಣ ವಯಸ್ಸಿನಲ್ಲಿಯೇ ಲಗ್ನ ಮಾಡಿಕೊಡುವದರಿಂದ ಅವರ ಮೊಳಕೆಯಲ್ಲಿಯೇ ಚಿಗುರನ್ನು ಮುರಿದು ಸಸಿಯನ್ನು ಕವರಿಸಿ ಬಿಡುತ್ತಾರೆ. ಅತ್ತೆಯ ಮನೆಯಲ್ಲಿ ಅವಳ ವಯೋಮಾನದ ಬುದ್ಧಿಗನುಸರಿಸಿ ನಡೆಯಲು ಬಂಧನ. ಹೀಗಾಗಿ ಅವಳ ಮನಸ್ಸಿನ ಮೇಲೆ ಕೆಟ್ಟ ಪರಿಣಾಮ. ಕೆಲವೊಂದು ವಿಚಾರವಂತರ ಮನೆಯಲ್ಲಿ ಸೊಸೆಯು ಬೇರೆಯವರ ಮನೆಯಿಂದ ಬಂದಿದ್ದಾಳೆ ಎನ್ನುವ ಭಾವನೆಯಿಂದ ನಡೆಸಿಕೊಳ್ಳುವರು. ಒಂದೊಂದು ಕಡೆ ಹಿರಿಯರು ಸರಿಯಾಗಿ ನಡೆಸಿಕೊಳ್ಳದಿದ್ದಾಗ ಮನೆಯಲ್ಲಿ ಆ ಹೆಣ್ಣುಮಗಳ ದುಃಖದ ಸಲುವಾಗಿ ಸಣ್ಣ ವಯಸ್ಸಿನವರಾದ ಅವಳ ಭಾವನ್ಮೈದುನಂದಿರು ಅವಳ ಮೇಲೆ ಕನಿಕರ ತೋರಿಸಹೋದರೆ ಅವರಿಗೆ ಹಿರಿಯರಿಂದ ಅಪಶಬ್ದಗಳು ಬರುವವು. ಮತ್ತು ಆ ವಯಸ್ಸಿನಲ್ಲಿ ದೇಹಧರ್ಮವಾದರೂ ಹಾಗೇ ಇರುವದರಿಂದ ಕನಿಕರ ಮಾಡುವವರ ಮೇಲೆ ಹೆಣ್ಣುಮಕ್ಕಳ ಮನಸ್ಸಾದರೂ ಎಳೆಯಲ್ಪಟ್ಟು ಅಡ್ಡ ಹಾದಿ ಹಿಡಿಯಬಹುದು. ಹೀಗಾಗಿ ಎಲ್ಲ ತೆರನಾಗಿ ಅವರ ಸ್ವಭಾವವು ಅಸ್ವಾಭಾವಿಕವಾಗಿ ಬೆಳೆದು ಅವರು ಸಿಡುಕುತನವುಳ್ಳವರು, ಉದಾಸೀನ, ಚಾಡಿಕೋರರಾಗುವರು.

೨೦—೨—೪೮:— ಒಳ್ಳೆಯದರೊಳಗಿಂದ ಕೆಟ್ಟದ್ದು, ಕೆಟ್ಟದ್ದರೊಳಗಿಂದ ಒಳ್ಳೆಯದು ಹೊರಡುತ್ತದೆ. ಸಮಾಜದಲ್ಲಿ ಒಮ್ಮೆ ಹಾಕಿಕೊಟ್ಟ ನಿಯಮಗಳನ್ನು ಹೆಣ್ಣುಮಕ್ಕಳು ಈಗಲೂ ಅನುಸರಿಸಿ ನಡೆಯಬೇಕೆಂದು ಹೇಳುತ್ತಾರೆ ಆದರೆ ಈಗ ಬದಲಾದ ಪರಿಸ್ಥಿತಿ ನೋಡಬೇಕಾಗಿದೆ. ಮೊದಲು ಸೌಕರ್ಯಕ್ಕಾಗಿ ಮಾಡಿಕೊಂಡ ನಿಯಮಗಳನ್ನು ಈಗ ತೆಗೆಯದೆ ಅವುಗಳಿಗೆ ಅಂಟಿಕೊಂಡೇ ನಡೆಯಬೇಕೆನ್ನುವದು ಗಂಡಸರ ತಪ್ಪಾಗಬಹುದೇ ಹೊರ

ತು ಈ ಪದ್ಧತಿ ಮಾಡಿದುದೇ ತಪ್ಪೆಂದು ಹೇಳಲು ಬರುವಂತಿಲ್ಲ. ಆಗಿನ ಪರಿಸ್ಥಿತಿಗನುಸರಿಸಿ ಆ ಪದ್ಧತಿ ಮಾಡಲಾಗಿತ್ತು. ಇದರಂತೆ ನೋಡುತ್ತಾ ಹೋದರೆ ಮ.ಗಾಂಧಿಯನ್ನು ಕೊಂದ ಶ್ರೀ. ಗೋಡಸೆಯ ವಿಷಯ ನೋಡಿದರೆ ಅವನ ತಪ್ಪು ದೊಡ್ಡದಾಗಿ ಕಂಡರೂ ಸಹ ವಿಚಾರ ಮಾಡುತ್ತಾ ಹೋದರೆ ಅದರಲ್ಲಿ ಅವನ ತಪ್ಪು ಅಷ್ಟು ಕಾಣಿಸುವುದಿಲ್ಲ. ಅವನ ಮನಸ್ಸನ್ನು ತಿಳಿಯುತ್ತಾ ಹೋದರೆ ಆ ಪ್ರೇರಣೆಯುಂಟಾಗಲು ಪರಿಸ್ಥಿತಿಯೇ ಕಾರಣವಾಗಿತ್ತು. ಆದರೆ ಅವನು ಸ್ವಲ್ಪ ವಿಚಾರ ಮಾಡದಿದ್ದುದೇ ಅವನ ತಪ್ಪೆಂದು ಕಾಣುತ್ತದೆ ಈ ಪ್ರಕಾರ ಜಗತ್ತಿನಲ್ಲಿ ಅಲ್ಲೋಲ ಕಲ್ಲೋಲವಾಗಿರುವಾಗ ತಮಗೂ ಗಂಡಸರಷ್ಟೇ ಹಕ್ಕು ಬೇಕೆಂದು ಕೇಳಿದರೆ ಅದರಿಂದ ಪ್ರಯೋಜನವಿಲ್ಲ ಆದರೆ ಅವರು ಗಂಡಸರಂತೆ ತಮ್ಮ ಕಾರ್ಯದಲ್ಲಿ ಭಾಗವಹಿಸಬೇಕು. ಸುಮ್ಮನೆ ಕುಳಿತು ತನಗೆ ಸೌಕರ್ಯ ಬರಬೇಕೆಂದರೆ ಅದು ಸಿಗಲಾರದು. ಮುಂದೆ ಗಂಡಸರ ಸರಿಸಮಾನ ಕೆಲಸ ಮಾಡಹತ್ತಿದರೆ ನಮ್ಮ ಹಕ್ಕು ನಾವೇ ಗಳಿಸಿಕೊಳ್ಳಬಹುದು. ಗಂಡಸು ಕೊಡಬೇಕಾಗಿಲ್ಲ. ಮುಖ್ಯವಾಗಿ ಈಗ ನಾವು ತಿಳಿಯಬೇಕಾದದ್ದೇನಂದರೆ ನಮ್ಮ ಹಕ್ಕು ನಾವೇ ಕಳೆದುಕೊಂಡಿದ್ದೇವೇ ಹೊರತು, ಗಂಡಸರು ಕಸಿದುಕೊಂಡಿಲ್ಲ. ಹರಿಜನರು ತೆಗೆದ ಒಂದು ಪತ್ರಿಕೆಯಲ್ಲಿ ಒಬ್ಬ ಹಿಂದುವು ಮ. ಗಾಂಧಿಯವರನ್ನು ಕೊಂದದ್ದರಿಂದ ತಾವು ಇನ್ನು ಮುಂದೆ ಹಿಂದುಗಳೆನ್ನಿಸಿಕೊಳ್ಳಲು ತಯಾರಿಲ್ಲವೆಂದು, ಇನ್ನು ಹರಿಜನರೆನ್ನುವ ಹೆಸರನ್ನು ಬಿಟ್ಟು "ಗಾಂಧೀಜನ"ರೆಂದು ಹೆಸರಿಟ್ಟುಕೊಳ್ಳುವೆವೆಂದು ಹೇಳಿದ್ದಾರೆ. ಮುಂಬಯಿಯ ಮಂತ್ರಿಗಳಾದ ಶ್ರೀ. ಖೇರರು ಹೇಳುವದೇನೆಂದರೆ ಒಬ್ಬ ಹಿಂದು ಬ್ರಾಹ್ಮಣನು ಮಹಾತ್ಮರನ್ನು ಕೊಲೆ ಮಾಡಿದನೆಂದು ಇಡೀ ಬ್ರಾಹ್ಮಣ ವರ್ಗಕ್ಕೇ ಕುಂದುತರುವದು ಸಾಧ್ಯವಿಲ್ಲ. ಇದರಿಂದ ಶ್ರೀ. ಖೇರರು ಬ್ರಾಹ್ಮಣರನ್ನು ಮೇಲ್ಕಟ್ಟಿಕೊಂಡು ಮಾತುನಾಡುತ್ತಿರುವರೆಂದು ಅವರ ಮೇಲೆ ಆರೋಪ ಬಂದಿತು. ವ್ಯವಹಾರದಲ್ಲಿ ಸರಿಯಾಗಿ ನಡೆಯಬೇಕೆಂದರೆ ಎಷ್ಟು ತಾಕಲಾಟವಿದೆ. ಈ ತಾಕಲಾಟವನ್ನು ಹೇಗೆ ಬಿಡಿಸಿಕೊಂಡು ಜಾಣತನದಿಂದ ನಡೆಯಬೇಕೆನ್ನುವದನ್ನು ನಾವು ಹೆಣ್ಣುಮಕ್ಕಳು ವಿಚಾರ ಮಾಡತಕ್ಕದ್ದಿದೆ.

೨೧—೨—೪೮ :— ಒಂದಾನೊಂದು ಕಾಲದಲ್ಲಿ ಒಳ್ಳೇ ಉತ್ತಮ ಸಂಸ್ಕಾರವೆಂದದ್ದು ಕಾಲಾಂತರದಿಂದ ಅದರೊಳಗಿನ ಸಣ್ಣ ದೋಷವೇ ಬೆಳೆಯುತ್ತ ಹೋಗಿ ಮುಂದೆ ಅ ದ ರ ಲ್ಲಿ ಬದಲಾವಣೆಯಾಗುವದು. ಮೊದಲು ವರ್ಣಾಶ್ರಮಗಳಿದ್ದವು. ಮುಂದೆ ಸಾವಿರಾರು ವರ್ಣಗಳಾಗಹತ್ತಿದವು. ಇದರಲ್ಲಿ ಬ್ರಾಹ್ಮಣರು ಶ್ರೇಷ್ಠರಾದರು. ಅವರ ಕೆಲವು ದೋಷಗಳು ಬೆಳೆಯುತ್ತ ಹೋದಂತೆ ಅವು ಅತಿರೇಕಕ್ಕಿಟ್ಟವು. ಗಂಡಸರು ಹೊರಗೆ ಅಡ್ಡಾಡುವ ಪ್ರಸಂಗ ಬಂದು ಅವರಿಗೆ ನಿರ್ವಾಹವಿಲ್ಲದೆ ಬೇರೆ ವರ್ಣದವರೊಡನೆ ಸಹಕರಿಸಿ ನಡೆಯಬೇಕಾಯಿತು. ಆದರೆ ಹೆಣ್ಣುಮಕ್ಕಳಿಗೆ ಈ ಪ್ರಸಂಗ ಬಾರದ್ದರಿಂದಲೂ ಅವರ ಮೇಲೆ ಪಾವಿತ್ರ್ಯ ಕಾಪಾಡುವ ಹೊಣೆಯನ್ನು ಜಾಸ್ತಿಯಾಗಿ ಹಾಕಿದುದರಿಂದಲೂ ಅವರಿಗೆ ಬೇರೆಯವರೊಡನೆ ಬಳಕೆ ಮಾಡಲು ಸಾಧ್ಯವಿಲ್ಲದಾಯಿತು. ಮನೆಯ ಯಜಮಾನಿಯರನ್ನು ಪವಿತ್ರವಾಗಿಡಬೇಕೆಂದು ಇಲ್ಲದ ಧಾರ್ಮಿಕ ಕಲ್ಪನೆಗಳನ್ನು ಅವರ ತಲೆಯಲ್ಲಿ ತುಂಬಿ ಅವರನ್ನು ಘೋಷಾ ರೀತಿಯಲ್ಲಿ ಇಡಹತ್ತಿದರು ಇದರ ಅತಿರೇಕವಾಗಿ ಕೆಲವು ಹೆಣ್ಣುಮಕ್ಕಳು ಪಾವಿತ್ರ್ಯದ ಸೋಗಿನಲ್ಲಿ ವ್ಯಭಿಚಾರದ ಆಗರವಾಗಿರುವ ಉದಾಹರಣೆಗಳೂ ಇವೆ ಕೀಳ ಜಾತಿಯಲ್ಲಿ ಸಹ ಎಷ್ಟೋ ರೂಪವತಿಯರು ಹುಟ್ಟುತ್ತಾರೆ ಇದು ಯಾತರಿಂದ? ಬ್ರಾಹ್ಮಣರು ಅಥವಾ ಪರದೇಶದಿಂದ ಬಂದ ಗಂಡಸರಿಂದ ಈ ಕೀಳು ಜಾತಿಯ ಜನರೊಡನೆ ವ್ಯವಹಾರ ನಡೆದದ್ದರಿಂದ ಅವರಲ್ಲೂ ಸಹ ರೂಪವತಿಯರೂ, ಸಾಹಸಿಗಳೂ ಆದ ಮ ಕ್ಕ ಳಾ ದ ದ್ದು ಕಾಣುತ್ತದೆ. ತಮ್ಮ ಮನೆಗೆ ಕೆಲಸ ಮಾಡಲು ಬಂದ ಒಕ್ಕಲಗಿತ್ತಿಯೊಡನೆ ಗಂಡಸರು ವ್ಯವಹಾರ ಮಾಡುತ್ತಾರೆ. ಮನುಷ್ಯನಿಗೆ ಒಳ್ಳೇ ಸಂಸ್ಕಾರವಾಗಬೇಕಾದರೆ ಎಡಬಲದ ಸಂಸ್ಕಾರಗಳು ಒಳ್ಳೆಯದಾಗಿರಬೇಕು. ಹೆಣ್ಣುಮಕ್ಕಳಿಗೆ ಒಳ್ಳೇ ಕಡುತರವಾದ ಸಂಸ್ಕಾರವಿದ್ದದ್ದರಿಂದ ಮತ್ತು ಅದರಿಂದ ಒಳ್ಳೇ ! ಪರಿಣಾಮವು ಕಂಡುಬಂದದ್ದರಿಂದ ( ಅವರ ದೇಹದ ಮೇಲೆ ಏನೇ ಪರಿಣಾಮವಾಗಲಿ ) ಪಾಶ್ಚಿಮಾತ್ಯರೂ ಸಹ ಹಿಂದು ಸ್ತ್ರೀಯರನ್ನು ಹೊ ಗ ಳು ತ್ತಾ ರೆ. ಸುಧಾರಿಸಿದ ಗಂಡಂದಿರು ಬೇರೆ ಬೇರೆ ಗಂಡಸರನ್ನು ಮನೆಗೆ ತರಹತ್ತಿದ್ದರಿಂದ ಘೋಷಾದಲ್ಲಿದ್ದ ಹೆಣ್ಣುಮಕ್ಕಳೂ ಸಹ ಗಂಡಸಿಲ್ಲದಾಗ ಮನೆಗೆ

ಬಂದ ಗಂಡಸರೊಡನೆ ಮೆಲ್ಲನೆ ಸ್ನೇಹ ಬೆಳೆಸಹತ್ತಿದರು. ಎಷ್ಟೋ ಗಂಡಸರು ತಮ್ಮ ಹೆಂಡಂದಿರ ಕಡೆಯಿಂದ ತಮ್ಮ ಸೂಳೆಯ ಕೆಲಸ (ಸೇವೆ) ವನ್ನು ಮಾಡಿಸಹತ್ತಿದರು. ಒಲ್ಲೆಂದರೆ ಹೊಡೆದು ಬಡಿದು ಮನೆಯಿಂದ ಹೊರಹಾಕುತ್ತಿದ್ದರು. ಇಂಥ ಪರಿಸ್ಥಿತಿಯಲ್ಲಿ ಉಚ್ಚ ಸಂಸ್ಕಾರ ಮಾಡಿದ್ದು ಮುಂದೆ ಕಡಿಮೆಯಾಯಿತು ವಾತಾವರಣ ಬದಲಾಯಿತು. ಇದರಿಂದ ಅಸಂತೋಷ ಉತ್ಪನ್ನವಾಯಿತು. ಒಂದೇ ಸವನೆ ಬೇಡದ ಸಂಸ್ಕಾರಗಳನ್ನು ಮಾಡುತ್ತ ಹೋದಲ್ಲಿ ಪರಿಸ್ಥಿತಿಯು ಆ ಸಂಸ್ಕಾರಗಳಿಗೆ ಅನುಕೂಲವಿಲ್ಲದಲ್ಲಿ ಆ ಸಂಸ್ಕಾರಗಳ ಪರಿಣಾಮವು ಬಹಳ ದಿನ ಉಳಿಯುವದಿಲ್ಲ. ಆದರೆ ಪರಿಸ್ಥಿತಿಯಲ್ಲಿ ಬದಲಾದಂತೆ ಒಂದೇ ಮಾದರಿಯ ಸಂಸ್ಕಾರ ಕಾಯಮು ಉಳಿಯುವದು ಶಕ್ಯವಿಲ್ಲ. ಎಡಬಲಕಿನವರು ಕೆಟ್ಟವರಾದರೂ ತಾವು ಸರಿಯಾಗಿರುವದು ಯಾವಾಗಲೂ ಸಾಮಾನ್ಯವಾಗಿ ಶಕ್ಯವಿಲ್ಲ. ಒಬ್ಬೊಬ್ಬರಿಗೆ ಅದು ಸಹ ತಕ್ಕಮಟ್ಟಿಗೆ ಶಕ್ಯವಾಗಬಹುದು. ಗಂಡಸರ ಸಂಸ್ಕಾರಗಳು ಪರಿಸ್ಥಿತಿಯಂತೆ ಬದಲಾದ ಮೇಲೆ ಸ್ತ್ರೀಯರ ಸಂಸ್ಕಾರಗಳು ಬದಲಾಗುವವು. ಎಷ್ಟು ಕಟ್ಟುನಿಟ್ಟು ಮಾಡಿದರೂ ಆ ಪರಿಶ್ರಮವೆಲ್ಲ ವ್ಯರ್ಥ. ಯಾವ ಸಂಸ್ಕಾರಗಳು ಪೂರ್ಣವಾಗಲಾರವು.

೨೨–೨–೪೫ :— ಎಷ್ಟು ಒಳ್ಳೇ ಹೆಂಗಸರಿದ್ದು ಪವಿತ್ರತೆಯಿಂದ ನಡೆಯಬೇಕೆಂದು ನಿಶ್ಚಯಿಸಿದರೂ ಸಹ ಅವರ ಮೇಲೆ ಅನ್ಯಾಯಗಳಾಗಹತ್ತಿದವು. ಹಿಂದುಸ್ಥಾನದಲ್ಲಿ ಹಿಂದುಗಳದ್ದೇ ರಾಜ್ಯವಿದ್ದು, ರಾಜ್ಯದಾಡಳಿತವು ಒಂದೇ ಮಾದರಿಯದಿದ್ದು, ಸಂಸ್ಕಾರವೂ ಒಂದೇ ರೀತಿ ಆಗುತ್ತಿತ್ತು. ಆದರೆ ಇಂಗ್ಲೀಶರು ಬಂದ ಮೇಲೆ ಸಂಸ್ಕಾರಗಳು ಬೇರೆ ಬೇರೆ ಆಗಹತ್ತಿದವು. ಯಾವಾಗಾದರೊಮ್ಮೆ ಪುರಾಣ, ಹರಿಕೀರ್ತನೆಗಳು ಮಾತ್ರ ಕಿವಿಯ ಮೇಲೆ ಬೀಳಹತ್ತಿದವು. ಗಂಡಸು ಹೊರಗಿನ ಪ್ರಪಂಚದ ಚಟುವಟಿಕೆಗಳಲ್ಲಿ ಭಾಗವಹಿಸುವದರಿಂದ ಎಲ್ಲ ಸಂಸ್ಕಾರಗಳಲ್ಲಿಯೂ ಅವನು ಸುಧಾರಿಸಹತ್ತಿದನು. ಮತ್ತು ಮೊದಲಿನ ಸಂಸ್ಕಾರವು ಬದಲಾಯ್ತು. ಆದರೆ ಹೆಂಗಸರು ಹಾಗೇ ಉಳಿದರು. ಗಂಡಸು ಹೆಂಗಸಿಗೆ ಬೇರೆ ಸ್ವಾತಂತ್ರ್ಯ ಕೊಡದಿದ್ದರೂ ಸಹ ತನ್ನೊಡನೆ ತಿರುಗಾಡಲು, ಮಾತಾಡಲು ಕರೆಯಹತ್ತಿ

ದರೆ ಹೆಂಗಸರು ಇನ್ನೂ ಹಳೆ ಸಂಸ್ಕಾರದಲ್ಲಿದ್ದುದರಿಂದ ಅವರಿಗೆ ತೊಡಕಾಗು ತ್ತಿತ್ತು. ಮಕ್ಕಳು ಸತ್ತರೆ ಎಲ್ಲ ಕಡೆಗೂ ಒಂದೇ ತರದ ದುಃಖವೂ,, ಗಂಡನು ಸತ್ತರೆ ಬೇರೆ ಬೇರೆ ವರ್ಣಗಳಲ್ಲಿಯೂ ಬೇರೆ ಬೇರೆ ಸಂಸ್ಕಾರಗಳಿಂದ, ಪರಿಸ್ಥಿತಿಯ ನಿಯಮದಿಂದ ದುಃಖವಾದರೂ ಹೆಚ್ಚುಕಡಿಮೆ ಆಗುತ್ತದೆ. ಉಚ್ಚ ಜಾತಿಯಲ್ಲಿ ಪುನರ್ವಿವಾಹದ ಪದ್ಧತಿ ಇಲ್ಲ. ಹೆಣ್ಣುಮಕ್ಕಳಿಗೆ ದುಡಿಯುವ ಬಲವಿಲ್ಲ. ಆದ್ದರಿಂದ ಅವರು ಗಂಡನನ್ನೇ ಅವಲಂಬಿಸಿರುವ ಪ್ರಸಂಗ ಬಂದಿದೆ. ಇಂಥಹದರಲ್ಲಿ ಗಂಡ ಸತ್ತಲ್ಲಿ ಹೆಂಡತಿಗೆ ಗೋಳಾಟದ ಪ್ರಸಂಗ. ಎಷ್ಟೋ ಹೆಣ್ಣುಮಕ್ಕಳು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಮಾಡಿಕೊಳ್ಳುತ್ತಲಿದ್ದಾರೆ. ಉಚ್ಚವರ್ಗದಲ್ಲಿ ಗಂಡ ಸತ್ತರೆ ದುಃಖ ಜಾಸ್ತಿ ಯಾಗಲು ಪರಿಸ್ಥಿತಿಯೇ ಕಾರಣ ಗಂಡನಿರುವ ವರೆಗೆ ಹೆಂಡತಿಯು ಆಡ ಳಿತೆ. ಗಂಡ ಸತ್ತ ಮರುದಿನವೇ ಅವಳು ಹಿಡಿ ಕೂಳಿಗಾಗಿ ಪರಾವಲಂಬಿ ಯಾಗಬೇಕಾಗುವದು. ಅವಳಿಗೆ ಸ್ವಾತಂತ್ರ್ಯದಿಂದ ಜೀವಿಸುವ ಶಕ್ತಿ ಸಾಮ ರ್ಥ್ಯವಿಲ್ಲ. ಸ್ವತಂತ್ರ ಜೀವಿಸಬೇಕಾದರೆ ಯಾವದಾದರೊಂದು ಉಚ್ಚ ವಿಚಾರ ಆಚಾರಗಳು ಬೇಕಾಗುತ್ತವೆ. ಅದು ಮೇಲ್ವರ್ಗದ ಹೆಣ್ಣುಮಕ್ಕಳಿಗೆ ಸಿಗದ್ದ ರಿಂದ ಅವರ ಪರಿಸ್ಥಿತಿ ಬಹಳ ಕಠಿಣದ್ದಿದೆ. ಕೆಳ್ಳ ವರ್ಗದ ಸ್ತ್ರೀಯರು ಇಷ್ಟು ಕಷ್ಟಕ್ಕೊಳಗಾಗದ್ದರಿಂದ ಅವರ ಸ್ಥಿತಿಯು ಗಂಡ ಸತ್ತಮೇಲೆ ಅಷ್ಟು ಶೋಚನೀಯವಾಗುವದಿಲ್ಲ. ಇಂಗ್ಲೀಶರ ಆಳಿಕೆಯಲ್ಲಿ ಗಂಡಸು ಹೆಂಗಸಿನ ಮೇಲೆ ತೀರ ಭಿನ್ನ ಸಂಸ್ಕಾರಗಳಾಗಿ ಇಬ್ಬರಲ್ಲಿ ಬಹಳ ಅಂತರ ಬೀಳಲಾರಂ ಭಿಸಿತು. ಉಚ್ಚ ವರ್ಗದವರಿಗಿದ್ದಷ್ಟು ತೋರಿಕೆಗೆ ಆಡಂಬರವು, ಸುಖ ಲೋಲುಪತೆಯು ಹೆಚ್ಚಿಗೆ ಕಂಡರೂ ಸಹ ಸ್ತ್ರೀಯರಿಗೆ ಪಾರತಂತ್ರ್ಯ ಮತ್ತು ಗೋಳು ಹೆಚ್ಚು.

೨೩—೨—೪೮:— ಪಾವಿತ್ರ್ಯದ ಸಲುವಾಗಿ ಹೆಣ್ಣುಮಕ್ಕಳನ್ನು ಜ್ಞಾನ, ವಿಚಾರ ಇವುಗಳಿಂದ ದೂರದಲ್ಲಿಡುವದರಿಂದಲೇ ಅದರಲ್ಲಿಯೇ ಹಿಂದುಸ್ತಾನದ ವೈಭವವೆಂದು ತಿಳಿದುದರಿಂದ ಅವರನ್ನು ಪಾರತಂತ್ರ್ಯದಷ್ಟು ಪರಾವಲಂಬಿ ಮಾಡಿದ್ದರಿಂದ, ಅವರಿಗೆ ತಾಪವೆನಿಸಿ ಗಂಡಂದಿರು ಸತ್ತೊಡನೆ ಹೆಂಡಂದಿರು ಸಾಯಲು ಹೋಗುತ್ತಾರೆ. ಜನರು ವಯೋಮಾನಕ್ಕನುಸರಿಸಿ

ಕೆಲವರು ಬೇಗನೆ, ಕೆಲವರು ಮುದುಕರಾದ ಮೇಲೆ ಸಾಯಬಹುದು. ಮಕ್ಕಳಿದ್ದ ಹೆಂಡಂದಿರು ತಮ್ಮ ಗಂಡನು ಸತ್ತ ಮೇಲೆ ಮಕ್ಕಳನ್ನು ಸಾಕುವ ಹೊಣೆಯನ್ನು ಬಿಟ್ಟು ತಾವು ಪ್ರಾಣಹತ್ಯ ಮಾಡಿಕೊಂಡರೆ ಆ ಹುಡುಗರ ಜೋಕೆ ಯಾರು ಮಾಡಬೇಕು? ಒಂದು ವೇಳೆ ಅಕಸ್ಮಾತ್ತಾಗಿ ಯಾವದೇ ಒಂದು ರೋಗದಿಂದ ಸತ್ತರೆ ಆಗ ಏನಾದರೂ ಮಾಡಿಯೇ ಮಾಡುತ್ತಾರೆ. ಇದಕ್ಕೆ ಜಗತ್ತಿನ ದೃಷ್ಟಿಯಿಂದ ಮಹತ್ವವಿಲ್ಲ ಆದರೂ ತಾಯಿಯು ತಾನು ಆತ್ಮಹತ್ಯೆ ಮಾಡಿಕೊಂಡು ಮಕ್ಕಳನ್ನು ಪರದೇಶಿಗಳನ್ನಾಗಿ ಮಾಡುವದು ಮೂರ್ಖತನ. ಹೆಣ್ಣುಮಕ್ಕಳಿಗೆ ಉಚ್ಚ ವಿಚಾರವಿಲ್ಲ. ರಾಷ್ಟ್ರದ ಏಳ್ಗೆಯು ಇವರ ಮೇಲೆ ಅವಲಂಬಿಸಿದ್ದರೂ ಸಹ ಅವರಿಗೆ ಅದರ ಅರಿವಿಲ್ಲದೆ ತಮ್ಮ ಪಾವಿತ್ರ್ಯ, ಪ್ರೇಮ ಇವುಗಳ ತಪ್ಪು ಕಲ್ಪನೆಯಿಂದ ಗೊಂದಲದಲ್ಲಿ ಬಿದ್ದಿದ್ದಾರೆ. ಇವರ ಪರಿಸ್ಥಿತಿ ಹೀಗಿದ್ದಾಗ್ಯೂ ಸಹ ಮನೆಯ ಗಂಡಸರು ತಮಗೆ ಮನಬಂದಂತೆ ಅಡ್ಡಾಡಿ ವೇಶ್ಯಾಂಗನೆಯರಲ್ಲಿಗೆ ಹೋಗಿ ಚಲ್ಲಾಟ ಮಾಡುತ್ತಾರೆ. ಇದರಿಂದ ತಾವು ಕೆಟ್ಟ ಕೆಟ್ಟ ರೋಗಗಳ ಆಗರವಾಗುವದಲ್ಲದೆ ಮನೆಯಲ್ಲಿ ಪತಿವ್ರತೆಯೆಂದು ಹೇಳಿಕೊಂಡು ಕುಳಿತಿರುವ ಸಾಧ್ವಿ ಹೆಣ್ಣುಮಕ್ಕಳನ್ನು ಸಹ ರೋಗ, ಹುಣ್ಣುಗಳ ತವರುಮನೆಯಾಗಿ ಮಾಡುತ್ತಾರೆ. ಇದರಿಂದ ಹೆಣ್ಣು ಮಕ್ಕಳು ತಾವು ಈ ಪರಿಸ್ಥಿತಿಯಿಂದ ಪಾರಾಗ ಬೇಕಾದರೆ ಏನು ಮಾಡಬೇಕೆನ್ನುವದನ್ನು ವಿಚಾರ ಮಾಡತಕ್ಕದ್ದು. [illegible] ಉಚ್ಚವರ್ಣದ ಸ್ತ್ರೀಯರು ಈಹೊತ್ತು ವೈಭವ ಶಿಖರದ ಮೇಲಿ[illegible] ನಾಳೆ ಗಂಡ ಸತ್ತ ಕೂಡಲೇ ಪಾತಾಳಕ್ಕಿಳಿಯುತ್ತಾರೆ. ಅವಮಾನಕ್ಕೆ ಗುರಿಯಾಗುತ್ತಾರೆ. [illegible]ಗಿ ಗಂಡನ ಅಪವಿತ್ರ ಆಚಾರ ವಿಚಾರಗಳಿಂದ ಇವರ ಪಾವಿತ್ರ್ಯವು [illegible]ಗಿ ಹೋಗಿದ್ದರಿಂದ ಇಹ ಪರ ಈ ಎರಡು [illegible]ಗಳಿಗೆ [illegible]ತ್ತಾಳೆ.

[illegible] :— [illegible]ಯಿಂದ ೧೬ ವರ್ಷವಾದ ಮೇಲೆ ಗಂಡ [illegible] ಅಧಿಕಾರಕ್ಕೆ ಬರುತ್ತಾರೆ. ಮಗನಿಗೆ ೧೬ ವರ್ಷ [illegible] ಇದೆ. ಆದರೆ ಅದು ಹೆಣ್ಣುಮಕ್ಕ[illegible] ವದು ಸಂಶಯಾಸ್ಪದವೆಂದು ತಿಳಿದು

ಕೊಂಡು ಗಂಡಸು ಮಾನಸಶಾಸ್ತ್ರಕ್ಕನುಸರಿಸಿ ಅನ್ಯಾಯವಾಗಬಾರದೆಂದು ಕಾಯ್ದೆಯನ್ನು ಮಾಡಿದ್ದಿದೆ. ಆದರೆ ವ್ಯವಹಾರದಲ್ಲಿ ೬೦ ವರ್ಷ ಮುದುಕಿಗೆ ಸಹ ೧೬ ವರುಷದ ಹುಡುಗನಷ್ಟು ಅಧಿಕಾರವಿರುವದಿಲ್ಲ. ಗಂಡಸು ವ್ಯಭಿಚಾರ ಮಾಡಿದರೆ ತಪ್ಪು. ಸಧ್ಯದ ಏಕಪತ್ನೀವ್ರತದ ಕಾಯಿದೆಗನುಸರಿಸಿ, ಹೆಂಡತಿಯು ಸಹ ಇಂಥ ಗಂಡನಿಂದ ಬಿಡುಗಡೆ ಹೊಂದಲು ಬರುತ್ತದೆ. ಆದರೆ ಅವನು ಮಾಡಿದ ತಪ್ಪಿಗಾಗಿ ಯಾರೂ ಅಷ್ಟು ಲಕ್ಷ್ಯಕೊಡುವದಿಲ್ಲ. ಆದರೆ ಸಂಭಾವಿತ ಜನರಲ್ಲಿ ಸ್ವಲ್ಪ ಮರ್ಯಾದೆ ಕಡಿಮೆಯೆನಿಸಿಕೊಳ್ಳಬಹುದು. ಆದರೆ ಯಾವದೇ ಸಾರ್ವಜನಿಕ ಕೆಲಸ ಮಾಡುತ್ತಿದ್ದರೆ ಅವನ ತಪ್ಪೆಲ್ಲ ಮುಚ್ಚಿಹೋಗುತ್ತದೆ. ಆದರೆ ಹೆಣ್ಣುಮಕ್ಕಳು ವ್ಯಭಿಚಾರ ಮಾಡಿದರೆ ಸಮಾಜದವರು ಬಹಿಷ್ಕಾರ ಹಾಕುತ್ತಾರೆ. ಅವಳು ಹಗಲಿನಲ್ಲಿ ಬೇರೆ ಜನರೊಡನೆ ಮಾತಾಡಿದರೂ ಸಹ ಅವಳಿಗೆ ಹೆಸರಿಡುತ್ತಾರೆ. ಒಮ್ಮೆ ಹೆಣ್ಣುಮಕ್ಕಳು ಪರಾವಲಂಬಿ ಎಂದೊಡನೆ ಅವರಿಗೆ ಬೇಕಾದಂತೆ ಕಾಯ್ದೆ ಹಚ್ಚುತ್ತಾರೆ. ಹೆಣ್ಣುಮಕ್ಕಳ ಮದುವೆಯಲ್ಲಿ ವರದಕ್ಷಿಣೆ ಕೊಡಬೇಕು. ಮುಂದೆ ಫಲಶೋಭನದಲ್ಲಿ ಸಹ ಗೊಂದಲ ಹಾಕಿ ಹೆಣ್ಣನ್ನು ಬಿಡುತ್ತಾರೆ. ಈರೀತಿ ಹೆಣ್ಣು ಒಂದು ವಸ್ತುವಿಗೆ ಸಮಾನ. ನಿರ್ಜೀವ ಪ್ರಾಣಿಯಂತೆ ಮಾಡಿದ್ದಾರೆ. ಈ ಪ್ರಸಂಗವು ಎಲ್ಲ ಹೆಂಗಸರ ಮೇಲೂ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಇದ್ದೇ ಇದೆ. ಪ್ರತಿಯೊಬ್ಬರ ಆಯುಷ್ಯದಲ್ಲಿ ಸಹ ಇಂಥ ಸಂಗತಿಗಳ ಆರೋಪವು ಬಂದಿರಬಹುದು. ಆದ್ದರಿಂದ ಈ ಪ್ರಶ್ನೆ ಬಿಡಿಸುವ ಕರ್ತವ್ಯವು ಹೆಣ್ಣುಮಕ್ಕಳ ಮೇಲೆ ಇದೆಯೋ ಇಲ್ಲವೋ ಎನ್ನುವದನ್ನು ನಾಳೆ ನೋಡುವ.

೨೫—೨—೪೮ :— ಪಾವಿತ್ರ್ಯ ಕಾಯ್ದುಕೊಳ್ಳಬೇಕೆಂದು ಸೌಭಾಗ್ಯದ ಹೆಸರಿನ ಕೆಳಗೆ ಪಾರತಂತ್ರ್ಯದಲ್ಲಿದ್ದು ಕೆಟ್ಟದ್ದಕ್ಕೂ ಸಹ ಒಳ್ಳೆಯ ಹೆಸರನ್ನು ಕೊಟ್ಟು ಹೆಣ್ಣುಮಕ್ಕಳು ಒಡವೆ, ವಸ್ತ್ರ, ಹೆರಳು, ಕುಂಕುಮ ಇವುಗಳಲ್ಲಿ ಅವು ಕಾಣಿಸುತ್ತವೆ. ಮುಂದೆ ಜಾತಿ-ಜಾತಿಗಳಲ್ಲಿ ಬೇರೆ ಬೇರೆ ವ್ಯತ್ಯಾಸಗಳು ಬಂದು ಇದರ ಪರ್ಯವಸಾನವು ಗಂಡ ಸತ್ತ ಹೆಣ್ಣುಮಗಳು ಕುಂಕುಮ, ಒಡವೆ ವಸ್ತ್ರಗಳನ್ನು ಬಿಡಬೇಕೆಂದು ರೂಢಿ. ಗಂಡಸತ್ತ

ಹೆಣ್ಣುಮಕ್ಕಳು ಹೇಡಿಗಳಾಗಿ ಹೋಗುತ್ತಾರೆ. ಒಂದೊಂದು ಸಣ್ಣ ಸಣ್ಣ ಮಾತಿನಲ್ಲಿ ಮನುಷ್ಯನ ಯೋಗ್ಯತೆ ತಿಳಿಯುತ್ತದೆ. ಅವರವರ ಸೂಕ್ಷ್ಮಗುಣ, ರೀತಿ ಇವುಗಳಿಂದ ಮನುಷ್ಯನ ಯೋಗ್ಯತೆ ತಿಳಿಯುತ್ತದೆ. ಲಗ್ನದಿಂದ ಹೆಣ್ಣುಮಕ್ಕಳಿಗೆ ಪಾರತಂತ್ರ್ಯ ಬಂದಿತು. ಅವರು ಕೇವಲ ಸುಖದ ಕಡೆಗೆ ನೋಡುತ್ತಾರೆ. ಆದರೆ ಅದೇ ಗಂಡಸು ಸತ್ತು ಅಥವಾ ಹೆಂಡತಿಯನ್ನು ಬಿಟ್ಟಲ್ಲಿ ಅವಳಿಗೆ ಯಾವ ಆಧಾರವೂ ಇರುವದಿಲ್ಲ. ಗಂಡಂದಿರ ಬಲದ ಮೇಲೆ ಹೆಂಡಂದಿರು ಮೆರೆಯುತ್ತಿರುತ್ತಾರೆ. ಅವರ ಆಧಾರ ತಪ್ಪಿದೊಡನೆ ಕೂಲಿಯವಳಾಗುವ ಪ್ರಸಂಗ ಬರುತ್ತದೆ. "ಕಲಿಯುಗೆ ಸಂಘೇಶಕ್ತಿ" ಎಂಬಂತೆ ಯಾವದೇ ಒಂದು ಸಂಘಯಿದ್ದಲ್ಲಿ ಅದರ ಕೀರ್ತಿ ಹೆಚ್ಚಿದೆ. ಗಂಡಸರು ಸ್ವತಂತ್ರದಿಂದಿರುವದರಿಂದ ಅವರಲ್ಲಿ ಸಂಘಶಕ್ತಿ ಬೆಳೆಸಲು ಆಸ್ಪದ ಇದೆ. ಆದರೆ ಹೆಣ್ಣುಮಕ್ಕಳಿಗೆ ಲಗ್ನಮಾಡಿ ಒಬ್ಬ ಗಂಡಸಿನ ಕೈಯಲ್ಲಿ ಒಪ್ಪಿಸುವದರಿಂದ ಅವರಲ್ಲಿ ಸಂಘಶಕ್ತಿ ಇಲ್ಲದಂತಾಗಿದೆ. ಯಾರೇ ನಾಲ್ಕು ಜನ ಗಂಡಸರು ಸೇರಿ ಒಬ್ಬ ಹೆಣ್ಣುಮಗಳನ್ನು ಕೆಡಿಸಲು ಬಂದರೆ ನಾಲ್ಕು ಮಂದಿ ಹೆಣ್ಣುಮಕ್ಕಳಿಂದ ಆ ಅತ್ಯಾಚಾರ ಬಿಡಿಸಲಾಗುವದಿಲ್ಲ.

೨೬—೨—೪೮ ;— "ಸರ್ವಂ ಪರವಶಂ ದುಃಖಃ ಸರ್ವಂ ಆತ್ಮವಶಂ ಸುಖಂ" ಎನ್ನುವಂತೆ ಈಗ ಹೆಣ್ಣುಮಕ್ಕಳ ಪರಿಸ್ಥಿತಿ. ಕೆಳಗಿನ ವರ್ಣದವರಿಗೆ ಈ ದುಃಖವು ಅಷ್ಟಾಗದಿದ್ದರೂ ಸಹ ಮೇಲ್ವರ್ಣದವರಿಗೆ ಬಹಳವಾಗುತ್ತದೆ. ಬಹುತೇಕವಾಗಿ ಕೆಳಗಿನ ವರ್ಣದವರು ಬಡತನದ ಪರಿಸ್ಥಿತಿಯಲ್ಲಿರುವದರಿಂದ ಅವರಲ್ಲಿ ಗಂಡುಹೆಣ್ಣುಗಳೆರಡೂ ಕೂಲಿ ದುಡಿಯಬೇಕಾದ ಪ್ರಸಂಗ ಇದೆ. ಆದರೆ ಮೇಲವರ್ಗದವರಲ್ಲಿ ಬಡವರಿದ್ದಾಗ್ಯೂ ಸಹ ಹಿಂದಿನಿಂದ ಬಂದ ಸಂಸ್ಕಾರಗಳ ಮೂಲಕ ಹೆಣ್ಣುಮಕ್ಕಳು ದುಡಿಯುವದೆಂದರೆ ಅವಮಾನದ ಕೆಲಸವೆಂದು ತಿಳಿಯುತ್ತಾರೆ. ಗಂಡಸು ಎಷ್ಟು ಕಡಿಮೆ ಸಂಪಾದನೆ ಮಾಡಿದಾಗ್ಯೂ ಸಹ ಅವನ ಕುಟುಂಬದವರೆಲ್ಲರೂ ಅವನಲ್ಲೇ ಉಪಜೀವನವನ್ನು ಪಡೆಯಬೇಕು. ಇದೇ ಸಂಸಾರದ ಭಾರವೆಲ್ಲ ಒಬ್ಬನ ತಲೆಯ ಮೇಲೆಯೇ ಬಿದ್ದು, ಬಾಕಿ ಮನೆಯಲ್ಲಿಯ ಹೆಂಗಸರೆಲ್ಲರೂ ಕುಳಿತು ತಿನ್ನುವರಾದ್ದರಿಂದ ಬಡತನದ ಬವಣೆಯು ಸಂಸಾರದಲ್ಲಿ ಹೆಚ್ಚಾಗಿದೆ. ಈಗ ಇದೇ ಈ ಥಾ....ದಲ್ಲಿ

ನೋಡಿದರೆ ಇಲ್ಲಿನ ಜನವಸತಿಯು ೫೦೦೦೦ ಇದ್ದು ಅದರಲ್ಲಿ ಹೆಚ್ಚು ಕಡಿಮೆ ೪೦೦೦೦ ಜನರು ಬಡವರಾಗಿರುವದೇ ಕಾಣುತ್ತದೆ ಎನ್ನಲಡ್ಡಿಯಿಲ್ಲ. ಆದರೆ ಒಂದು ಕಡೆ ಈರೀತಿ ಹೊಟ್ಟೆಗಿದ್ದರೆ ಬಟ್ಟೆಗಿಲ್ಲ. ಬಟ್ಟೆಗಿದ್ದರೆ ಹೊಟ್ಟೆಗಿಲ್ಲದಂತಿರುವಾಗ ಇನ್ನೊಂದು ಕಡೆ ತುಪ್ಪಸಕ್ಕರೆಯಲ್ಲಿ ಮುಳುಮುಳುಗಿ ಏಳುವವರೂ ಇದ್ದಾರೆ. ಒಂದಕ್ಕೊಂದು ಮೇಳ ಕೂಡದಂತೆ ಪರಿಸ್ಥಿತಿ ತೀರ ವಿರುದ್ಧವಿದೆ- ಕೆಲವರು ತಿಂದು ತಿಂದು ಮೈಯುಬ್ಬಿಸಿ, ನಿಸ್ತೇಜ, ನಿರ್ವೀರ್ಯರಾಗಿದ್ದಾರೆ. ಮತ್ತೆ ಕೆಲವರು ಹೊಟ್ಟೆಗಿಲ್ಲದೆ ನಿಪ್ರಾಣರಾಗಿದ್ದಾರೆ, ಈ ಮಧ್ಯೆ ಹೆಣ್ಣುಮಕ್ಕಳಿಗೆ ಬಂಧನದಿಂದ ಮತ್ತಷ್ಟು ಅಶಕ್ತತನ ವುಂಟಾಗಿದೆ. ಈ ಪರಿಸ್ಥಿತಿಯಲ್ಲಿ ಹೆಣ್ಣುಮಕ್ಕಳು ಉತ್ತಮ ಪ್ರಜೆಗಳನ್ನು ಹುಟ್ಟಿಸುವದು ಅಸಾಧ್ಯವಾಗಿದೆ. ಹೆಣ್ಣುಮಕ್ಕಳಿಗೆ ತನ್ನ ಮಕ್ಕಳು ಉತ್ತಮರಾಗಬೇಕೆಂಬ ಹಂಬಲವಿದ್ದು ಅದಕ್ಕೆ ತಕ್ಕಂತೆ ಹುಡುಗರ ಪೋಷಣೆ ಮಾಡಬೇಕಾದರೆ ಸಹ ಅವಳು ಗಂಡಸಿನ ಮೇಲೆ ಅವಲಂಬಿಸಿರಬೇಕು. ಹೆಂಡರ, ಮಕ್ಕಳ ಹೊಟ್ಟೆಗೆ ಸಾಕಷ್ಟು ಸರಳ ಮಾರ್ಗದಿಂದ ಗಳಿಸಲು ಗಂಡಸಿಗೂ ಸಾಧ್ಯವಿಲ್ಲದಾಗಲು ಅವನು ವಾಮಮಾರ್ಗದಿಂದ ಹಣ ಗಳಿಸಲು ಪ್ರಯತ್ನಿಸುತ್ತಾನೆ. ಆಹಾರ ವಿಹಾರಗಳು ಹೇಗೆ ಮನುಷ್ಯನಿಗೆ ಸ್ವಾಭಾವಿಕವಿರುವವೋ ಹಾಗೇ ಮಕ್ಕಳನ್ನು ಹೆರುವದೂ ಸಹ ಸ್ವಾಭಾವಿಕವಿದೆ. ಇದರಿಂದ ಎಷ್ಟೋ ತರುಣರಿಗೆ ಹೆಂಡರು ಮಕ್ಕಳನ್ನು ಸಾಕಲು ಸಾಧ್ಯವಿಲ್ಲದೆ ಇರುವದರಿಂದ ಮದುವೆಯಿಲ್ಲದೆ ಇರುವ ಪ್ರಸಂಗ ಬಂದಿದೆ. ಕೃತ್ರಿಮರೀತಿಯಲ್ಲಿ ಪೂನವರು ಹೆಂಡಿರು, ಮಕ್ಕಳು, ಮನೆ, ಬಾಗಿಲು, ಸಂಸಾರ, ಸುಖ ಇವುಗಳನ್ನು ಹುಟ್ಟಿಸಿ ಅದರ ಬೆನ್ನು ಹತ್ತಿದುದರಿಂದಲೇ ಈ ಪರಿಣಾಮವಾಗಿದೆ. ಹೆಣ್ಣು ಸಿಗದಿರುವ ಲಗ್ನವಾಗದಿರುವ ಪ್ರಸಂಗಗಳಲ್ಲಿ ಗಂಡಸು ಹೆಣ್ಣಿನ ಸಲುವಾಗಿ ಬಾಯ್ಬಿಟ್ಟುಕೊಂಡು ಕೂಡಬೇಕಾಗುತ್ತದೆ. ಮತ್ತು ತಾನು ಎಷ್ಟೇ ಬಡವನಾಗಿದ್ದರೂ ಸಹ ತನಗೆ ಒಳ್ಳೇ ಸುರೂಪ, ಸಾತ್ವಿಕ, ಪತಿವ್ರತೆಯಾದ ಹೆಂಡತಿ ಸಿಗಬೇಕೆಂದು ಹಂಬಲಿಸುವವರೇ ಎಲ್ಲರೂ. ಈ ಹೆಣ್ಣುಮಕ್ಕಳ ಪಾವಿತ್ರ್ಯದ ಕಲ್ಪನೆಯಿಂದಲೇ ಜಗತ್ತಿನಲ್ಲಿ ಎಷ್ಟೋ ಗೊಂದಲಗಳು ನಡೆಯುತ್ತವೆ. ಈ ಲಗ್ನಪದ್ಧತಿಯಿಂದ ವಿಶಿಷ್ಟಪರಿಸ್ಥಿತಿಯಲ್ಲಿದ್ದವರಿಗೇ (ಆರ್ಥಿಕ) ಮಾತ್ರ ಲಗ್ನಕ್ಕೆ ಅನುಕೂಲವಾಗುತ್ತದೆ. ಪಾವಿತ್ರ್ಯದ ದೃಷ್ಟಿ

ಯಿಂದ ಎಲ್ಲ ಹೆಣ್ಣುಮಕ್ಕಳು ಬಡವರಿರಲಿ, ಶ್ರೀಮಂತರಿರಲಿ, ಸಶಕ್ತರಿರಲಿ, ಅಶಕ್ತರಿರಲಿ, ರೋಗಿ ಇರಲಿ, ನಿರೋಗಿ ಇರಲಿ ಅವರ ಲಗ್ನವಾಗಿಯೇ ತೀರಬೇಕೆಂಬ ಸಾಮಾಜಿಕ ಮತ್ತು ಧಾರ್ಮಿಕ ಕಟ್ಟಳೆಯ ನಿಮಿತ್ತ ಶ್ರೀಮಂತ ತರುಣರಾಗಲಿ, ಮುದುಕರಾಗಲಿ ೩-೪ ಲಗ್ನಗಳನ್ನು ಮಾಡಿಕೊಳ್ಳುವರು. ಆದರೆ ಬಡವರ ಲಗ್ನವಾಗುವದು ಶಕ್ಯವಿಲ್ಲ. ಸ್ವಾಭಾವಿಕ ಸಶಕ್ತ ಹಾಗೂ ನಿರೋಗಿ ಇದ್ದ ಬಡ ತರುಣರಿಗೆ ಕಾಮವಾಸನೆಯು ಪ್ರಬಲವಿರುವದರಿಂದ ಲಗ್ನಕ್ಕೆ ಆಸ್ಪದವು ಈ ಕೃತ್ರಿಮ ಪರಿಸ್ಥಿತಿಯ ನಿಮಿತ್ತ ಸಾಧ್ಯವಿಲ್ಲದ್ದರಿಂದ ಸ್ವಾಭಾವಿಕವಾದ ಕಾಮತೃಪ್ತಿಯ ಅಭಾವದ ಮೂಲಕ ಹಾಗೂ ಲಗ್ನಪದ್ಧತಿಯ ನಿಮಿತ್ತ ಉಂಟಾದ ಕೃತ್ರಿಮ ಕೊರತೆಯ ನಿಮಿತ್ತ ತರುಣರ ಪರಿಸ್ಥಿತಿಯು ಒಂದು ಮಾದರಿ ಶೋಚನೀಯದ್ದಾಗಿದೆ. ಅವರು ನಿರ್ಲಜ್ಜರು ಯಾವಾಗಲೂ ಬೀಭತ್ಸ ಮಾತುಕಥೆಗಳಿಂದ, ವಾಮಮಾರ್ಗದಿಂದ ತಮ್ಮ ತೃಪ್ತಿಮಾಡಿಕೊಳ್ಳಲು ಹವಣಿಸುತ್ತಾರೆ. ಸಂಧಿ ಸಿಕ್ಕಾಗ ಬಲಾತ್ಕಾರ ಮಾಡಲು ಶ್ರೀಮಂತ ವ್ಯಸನಿ ತರುಣ ವೃದ್ಧ ಹೆಂಡಂದಿರನ್ನು ಮೋಸ ಮಾಡಿ ವಾಮಮಾರ್ಗಕ್ಕೆ ಹಚ್ಚಿ ಪಾವಿತ್ರ್ಯದ ನಿಯಮಭಂಗಮಾಡುವರು. ಕಾಯಿದೆಗಳನ್ನು ಮುರಿದು ಸಮಾಜದಲ್ಲಿ ಅಶಾಂತಿಯನ್ನುಂಟು ಮಾಡುವರು. ಇದರಿಂದ ಸಮಾಜದಲ್ಲಿ ಕಾಮವಿಷಯಕ್ಕೆ ಸಾಂಕಂಕವೃತ್ತಿ, ಬಲಾತ್ಕಾರ ಮತ್ತು ಅತ್ಯಾಚಾರಕ್ಕೆ ಆಸ್ಪದ ಸಿಕ್ಕು ಸ್ತ್ರೀಜೀವನವು ಗಂಡಾಂತರಕ್ಕೊಳಗಾಗಿದೆ.

೨೭—೨—೪೮ :—ಸಾಧಾರಣವಾಗಿ ಮನುಷ್ಯನನ್ನು ಯಾವ ಪರಿಸ್ಥಿತಿಯಲ್ಲಿಟ್ಟಿರುತ್ತಾರೋ ಅದರಂತೆ ಗುಣಗಳು ಅವನಲ್ಲಿ ಕಂಡುಬರುತ್ತವೆ. ಪ್ರತಿಯೊಬ್ಬರ ಸ್ವಭಾವ ನೋಡುತ್ತಾ ಹೋದರೆ ಪ್ರತಿಯೊಬ್ಬರಲ್ಲೂ ಒಂದಿಲ್ಲೊಂದು ತಪ್ಪು ಗುಣಗಳು ಕಂಡುಬರುತ್ತಲೇ ಇರುತ್ತವೆ. ಒಂದೇಕೆ ಎಷ್ಟೋ ತಪ್ಪೆಂದರೂ ಅಡ್ಡಿಯಿಲ್ಲ. ಇಷ್ಟು ತಪ್ಪಿದ್ದವರೊಡನೆ ಹೇಗೆ ಇರುವದೆಂಬು ಸಹ ಕೆಲವರು ಯೋಚಿಸಬಹುದು. (ಯೋಚಿಸುವವರಲ್ಲಾದರೂ ತಪ್ಪು ಇದ್ದೇ ಇರುತ್ತದೆ.) ಆದರೆ ಹತ್ತು ಜನರು ಅದೇ ಒಬ್ಬನ ದುರ್ಗುಣಗಳ ಕಡೆಗೆ ನೋಡದೆ ಒಳ್ಳೇ ಗುಣಗಳ ಕಡೆಗೆ ನೋಡಿದರೆ ಹತ್ತು ಜನರಿಗೂ

ಆ ಒಬ್ಬನಲ್ಲಿರುವ ಒಂದೊಂದು ಒಳ್ಳೆಯ ಗುಣಗಳು ಕಾಣಸಿಕ್ಕುತ್ತವೆ. ಹೀಗಾಗಿ ಪ್ರತಿಯೊಬ್ಬನಲ್ಲೂ ಒಳ್ಳೇ ಗುಣಗಳಾದರೂ ಸಾಕಷ್ಟು ಕಾಣಬಹುದು. ಇದರಂತೆ ಹೆಣ್ಣುಮಕ್ಕಳ ದೋಷದ ಕಡೆಗೆ ನೋಡದೆ ಅವರ ಗುಣದ ಕಡೆಗೆ ಈ ಜಗತ್ತಿನ ಉದ್ಧಾರವಾಗುವಂತೆ ಮಾಡುವ ಅನೇಕ ಗುಣಗಳು ಅವರಲ್ಲಿ ಇವೆ. ಗಂಡಸರೊಡನೆ ಅವರು ಸಹಕರಿಸಿ ನಡೆದು ಅವರ ಎಲ್ಲ ಕೆಲಸಗಳಿಗೂ ಹೆಗಲಿಗೆ ಹೆಗಲು ಕೊಟ್ಟು ಅವರ ಸುಖದುಃಖದಲ್ಲಿ ಸಮಭಾಗಿಗಳಾಗುವಂತೆ ಮಾಡಿದರೆ ಜಗತ್ತಿಗೇ ಕಲ್ಯಾಣವಿದೆ. ಹೆಣ್ಣುಮಕ್ಕಳಲ್ಲೇನೂ ವೀರತ್ವ, ಶೂರತ್ವ, ಧೃಢನಿಶ್ಚಯ, ಕಷ್ಟಸಹಿಷ್ಣುತೆ ಇವುಗಳಿಗೇನು ಕಡಿಮೆಯಿಲ್ಲ. ಆದರೆ ಗಂಡಸು ,ತನ್ನ ಮನಸ್ಸಿನ ಹೇಡಿತನದ ಮೂಲಕ, (ತನ್ನ ಹೆಂಡತಿಯು ಯಾರನ್ನಾದರೂ ನೋಡಿ ಮೋಹಿಸಿದರೆ ಅಥವಾ ಬೇರೆ ಯಾರದೇ ಕೆಟ್ಟ ದೃಷ್ಟಿಯು ಅವಳ ಮೇಲೆ ಬೀಳುವದೋ ಏನೋ ಎಂಬ ಭಯದಿಂದ) ಸ್ವಾರ್ಥದ ಮೂಲಕ ದೊಡ್ಡ ದೊಡ್ಡ ತತ್ವಗಳ ನೆರಳಿನಲ್ಲಿ ತನ್ನ ಮನಸ್ಸಿನ ಹೇಡೀ ಸ್ವಾರ್ಥದ ಹೊಟ್ಟೇಕಿಚ್ಚಿನ ಕಲ್ಪನೆಗಳನ್ನು ಮುಚ್ಚಿಟ್ಟು ಪಾವಿತ್ರ್ಯವೆಂಬ ಧಾರ್ಮಿಕ ಹೊದಿಕೆಯನ್ನು ಹಾಕಿಕೊಂಡಿದ್ದಾನೆ. ಹೀಗಾಗಿ ಹೆಣ್ಣುಮಕ್ಕಳು ಹೇಡಿಗಳಾಗಿದ್ದಾರೆ. ಇಷ್ಟೇ ಅಲ್ಲ ಅವರ ಸಲುವಾಗಿ ಅನಾದರ ಹುಟ್ಟುತ್ತಾ ಬಂದಿದೆ. ಈಗೀಗ ಇವರ ರೋಗದ ಮೂಲವು ಗೊತ್ತಾಗಿ ಗಂಡಸರ ಸಲುವಾಗಿ ಅನಾದರ ಹುಟ್ಟುತ್ತಾ ನಡೆದಿದೆ. ಇನ್ನೂ ಅವರು ಒಳಗಿಂದೊಳಗೆ ಕುದಿಯುತ್ತಿರುತ್ತಾರೆ. ಅದು ಯಾವಾಗ ಸಿಡಿದು ಹೋಗುತ್ತದೆಯೋ ದೇವರೇ ಬಲ್ಲ. ತನ್ನ ಇಷ್ಟವನ್ನು ಸಾಧಿಸಲು ಮನುಷ್ಯನು ಬೇರೆ ಬೇರೆ ರೀತಿಗಳಲ್ಲಿ ಬೇಕಾದಷ್ಟು ಪ್ರಯತ್ನ ಮಾಡುತ್ತಿರುತ್ತಾನೆ. ಇದರಿಂದ ತಿಳಿಯುವದೇನೆಂದರೆ ಮನುಷ್ಯನ ಯಾವದೇ ಕೆಲಸವು ಕೈಗೂಡಬೇಕಾದರೆ ಬಲವಾದ ಇಚ್ಛೆ ಇರಬೇಕು. ಇದರಂತೆ ಹೆಣ್ಣುಮಕ್ಕಳಾದರೂ ತಮ್ಮ ಏಳಿಗೆಗಾಗಿ ಒಂದು ಇಚ್ಛೆಯನ್ನಿಟ್ಟುಕೊಂಡು ಹೋರಾಡಿದಲ್ಲಿ ಅವರಿಗೆ ಆ ಇಚ್ಛಾಬಲದಿಂದಲೇ ಮೈಯಲ್ಲಿ ಸಹ ಶಕ್ತಿ ಬರುವದು. ಗಂಡನು ಬಡವನಿದ್ದಾಗ್ಯೂ ಸಹ ಕಷ್ಟಪಟ್ಟು ದುಡಿದು ರೊಕ್ಕ ಗಳಿಸುತ್ತಾನೆ. ತೀರ ರೊಕ್ಕವಿಲ್ಲದವರೂ ಸಹ ಕಷ್ಟಪಟ್ಟು ದುಡಿದು ಹೇಗೋ ರೊಕ್ಕ ಗಳಿಸಿ ಅದನ್ನು ಕಾಯ್ದುಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ ಹೆಂಗಸರಿಗೆ

ದುಡ್ಡು ಹೇಗೆ ಗಳಿಸಬೇಕೆನ್ನುವದೇ ಗೊತ್ತಿಲ್ಲ. ಗಂಡನ ಆಸ್ತಿಯೇ ತನ್ನ ಆಸ್ತಿಯೆಂದು ತಿಳಿಯುತ್ತಾಳೆ. ಆದರಿಂದ ಒಂದು ವೇಳೆ ಗಂಡ ಆಸ್ತಿಯನ್ನು ಹಾಳು ಮಾಡಹತ್ತಿದರೆ ಹೆಂಡತಿಯು ಆತಂಕ ಮಾಡಲಾರಳು. ತನ್ನ ಗಂಡನು ಯಾವದೇ ಕಾರಣದಿಂದ ಬೇರೊಬ್ಬ ಹೆಂಡತಿಯನ್ನು ಲಗ್ನವಾದರೆ ಹೊಟ್ಟೆಕಿಚ್ಚು ಪಡುತ್ತಾಳೆ. ಏಕೆಂದರೆ ಎಲ್ಲ ವ್ಯವಹಾರವು ದುಡ್ಡಿನಿಂದಲೇ ನಡೆಯುತ್ತದೆ. ಆ ದುಡ್ಡು ಗಳಿಸುವ ಯೋಗ್ಯತೆಗೆ ಆಸ್ಪದ ವಿಲ್ಲದ್ದರಿಂದ ಇದ್ದದ್ದನ್ನು ಕಾಪಾಡಿಕೊಳ್ಳುವದು, ಆತ್ಮಸಂರಕ್ಷಣೆಗಾಗಿ ಅವಶ್ಯಕ ವಿರುವದು. ಹಿಂದೆ ಶಕುಂತಲೆಯು ಅತ್ತೆಯ ಮನೆಗೆ ಹೋಗುವಾಗ್ಗೆ ಈ ಎಲ್ಲ ಮೇಲಿನ ವಿಷಯವನ್ನು ಬಲ್ಲಂಥ ಕಣ್ವರು ಹೆಂಗಸರ ಸ್ವಭಾವಕ್ಕನುಸರಿಸಿರುವ ಈ ಎಲ್ಲ ಗುಣಗಳ ಸಲುವಾಗಿ ಶಕುಂತಲೆಗೆ, ದುಶ್ಯಂತನು ಅರಸನಿದ್ದು ಅವನಿಗೆ ಸಾವಿರಾರು ಹೆಂಡರಿರಬಹುದು, ಆದ್ದರಿಂದ "ನೀನು ಅವರೊಡನೆ, ದ್ವೇಷಿಸದೆ ಪ್ರೀತಿಯಿಂದಿದ್ದು ಗುರುಹಿರಿಯರ ಸೇವೆಯಲ್ಲಿ ನಿರತಳಾಗು, ಪತಿಗೆ ಮೆಚ್ಚುವಂತೆ ಮಾಡು" ಎಂದು ಉಪದೇಶಿಸಿದ್ದಾರೆ. ಸವತಿ ಮತ್ಸರವು ಹುಟ್ಟಬೇಕಾದರೆ-ಹೆಂಗಸರ ಕೃತ್ರಿಮ ಪರಾವಲಂಬಿ ಪರಿಸ್ಥಿತಿಯೇ ಹೇಗೆ ಕಾರಣ ಎಂಬುದನ್ನು ನಾಳೆ ನೋಡುವಾ.

(ಮುಂದೆ ಸಾಗುವದು)

